# ಕರ್ಮವೀರ

ಹುಬ್ಬಳ್ಳಿ ತಾ. ೪—೪—೪

ಸಂಪುಟ ೨೦ ] [ ಸಂಚಿಕೆ ೪

ಜನಪ್ರಿಯ ಸಚಿತ್ರ ವಾರಪತ್ರಿಕೆ

ಸಂಪಾದಕರು : ಹ. ರಾ. ಪುರೋಹಿತ ]

[ ಸಂಸ್ಥಾಪಕರು : ರಂ. ರಾ. ದಿವಾಕರ


## - ಬಲ್ಲವರ ನುಡಿಗಳು -

ಪ್ರೇಮಕ್ಕಾಗಿ ಪಡುವ ಕ್ಲೇಶ ಕ್ಲೇಶವೇ ಅಲ್ಲ, ಏಕೆಂದರೆ ಆ ಕ್ಲೇಶವೆಲ್ಲ ಮರೆತುಹೋಗುತ್ತದೆ.

—ಎಕ್‌ಹಾರ್ಟ್

★

ಆಧ್ಯಾತ್ಮದ ವಿಷಯದಲ್ಲಿ ಅಲಂಕಾರಮಯವಾದ ಸುಂದರ ಶಬ್ದ ಜಾಲಗಳನ್ನು ಹೊಸೆಯುವದು ಇತರ ಭೌತಿಕ ವಿಷಯಗಳಿಗಿಂತಲೂ ಟೊಳ್ಳಾದ ನೀರಗುಳ್ಳಿಗಳೇ ಸರಿ. ಇಂದು ಜಗತ್ತಿನಲ್ಲಿ ರೂಢಿಬಿದ್ದು ಹೋಗಿರುವಂತೆ ಉಜ್ವಲ ಶಬ್ದಗಳನ್ನು ಮತ್ತು ಚಮತ್ಕಾರದ ಮಾತುಗಳನ್ನು ಆಡುವ-ಕೇಳುವ ಮೂಲಕವಾಗಿ ತಾನು ಸಜ್ಜನಿಕೆಯ ವಾತಾವರಣದಲ್ಲಿ ಬೆಳೆದಂತಾಗುವದೆಂದು ಬಗೆಯುವವನು ಮನವಾರೆ ವಾರ್ತಾಲಾಪ ಮಾಡಬಹುದು. ಆದರೆ ಅವನ ಸಂಭಾಷಣೆಗಳು ಸ್ವರ್ಗಕ್ಕೆ ಕೇಳಿಸಲಾರವು.

—ವಿಲಿಯಂ ಲಾ



### ಸಮುದ್ರಯಾನ

ಮುಂಬಯಿಯ ಜನಸಮ್ಮರ್ದದ ಬೇಗೆಯಿಂದ ರೋಸಿದವರಿಗೆ ಶಾಂತಿ ಸಮಾಧಾನಗಳನ್ನೊದಗಿಸಲು ಸಮುದ್ರರಾಜನ ವಿಶಾಲ ವಕ್ಷ ಯಾವಾಗಲೂ ಸಿದ್ಧವಾಗಿರುತ್ತದೆ. ಸಮುದ್ರಯಾನ ಸಂತೋಷವನ್ನು ಪಡೆಯಲು ಹಾಯಿ ಹಡಗವನ್ನೇರಿ ಹೊರಟವರನ್ನು ಚಿತ್ರದಲ್ಲಿ ಕಾಣಬಹುದು.

ಚಿತ್ರ : ಶ್ರೀ. ಕೆ. ಜಿ. ಹೆಗಡೆ

## ಕನ್ಹೇರಿಯ ಗುಹೆಗಳು (ಸಚಿತ್ರ)

— ಪುಟ ೫

ಒಂದು ವ್ಯಕ್ತಿ ಚಿತ್ರ

# ಜೀವವಿಲ್ಲದ ಜೀವನ

**ಬರೆದವರು:— ಶ್ರೀ. ಮು. ಕಂ. ಕೇಶವ**

"ನೀನೊಬ್ಬ ಹುಚ್ಚ ಹುಚ್ಚ" ಎಂದು ಕೇಳಿ ಕೇಳಿ ಎಂದಾದರೊಮ್ಮೆ ಇನ್ನೊಬ್ಬರಲ್ಲಿ ಹೇಳುವುದಿದೆ. ಲೋಕದ ಜನರಲ್ಲಿ 'ಹುಚ್ಚರು' ಎಂಬುವರು ಇದ್ದಾರೆ ಎಂಬುದು ಮನಸ್ಸಿನಲ್ಲಿಲ್ಲದಿದ್ದರೆ ವಿನೋದಕ್ಕಾದರೂ ಮೇಲಿನ ಮಾತು ಬರಲು ಸಾಧ್ಯವಿಲ್ಲ. ಹಾಗೆಯೇ 'ಅವನೊಬ್ಬ ವಿಚಿತ್ರ ವ್ಯಕ್ತಿ' ಎಂದಾಡುವುದನ್ನು ನೀವು ಕೇಳಿರಬೇಕು. ನೀವೇ ಅನೇಕ ಬಾರಿ ಅಂದಿರಬಹುದು. ಇದರಿಂದ ಲೋಕದಲ್ಲಿ ವಿಚಿತ್ರ ಪ್ರಕೃತಿಯ ಜನರು ಇದ್ದಾರೆ ಎಂಬುದನ್ನು ಅವರು ಒಪ್ಪಿಕೊಳ್ಳುತ್ತಾರೆ, ಅಥವಾ ನೀವು ಒಪ್ಪಿಕೊಳ್ಳುತ್ತೀರಿ ಎಂಬುದು ಅತಿ ಸ್ಪಷ್ಟ.

ನಾನಿಲ್ಲಿ ವಿವರಿಸಹೋರಟಿರುವ ವ್ಯಕ್ತಿ ಅಂಥ ಒಬ್ಬ ವಿಚಿತ್ರ ಮನುಷ್ಯ. ಅವನ ಮತ್ತು ನನ್ನ ಗೆಳೆತನ ಹಲವು ವರ್ಷಗಳಿಂದ ಸಾಗಿದೆ. ಆದರೆ ಆತನ ಬಾಳಿನ ಕುರಿತು ಕುತೂಹಲವುಂಟಾದುದು ಕೆಲವೇ ಸಮಯದ ಹಿಂದೆ. ಅವನ ಕೆಲವು ಅಸಹಜ ವರ್ತನೆಗಳಿಂದಾಗಿ, ಆತನ ಬಾಲ್ಯ ಮತ್ತು ತಾರುಣ್ಯ ಕಾಲವನ್ನು ಕೆದರಿ ತಿಳಿದ ವಿಷಯಗಳಿಂದ, ವಿಶ್ವಾಸ ಯೋಗ್ಯವಾದ ಪೂರ್ಣ ಚರಿತ್ರೆಯನ್ನು ಬರೆಯಬೇಕೆಂದಿದೆ. ಆದರೆ ಇಲ್ಲಿ ಆತನ ಜೀವನದ ಕೆಲವು ಮುಖಗಳನ್ನು ಮಾತ್ರ ಪರಿಶೀಲಿಸುತ್ತೇನೆ.

ಅವನು ೧೯೦೨ ನೇ ಇಸ್ವಿಯ ಫೆಬ್ರುವರಿ ತಿಂಗಳು ೧೨ ನೇ ತಾರೀಖು ರಾತ್ರಿ ೩॥ ಘಂಟೆಗೆ ಜನಿಸಿದನು. ಜನ್ಮ ಕಳೆದ ಮರುದಿನ ಗ್ರಹದೂತರಾದ ಕಾಲಜ್ಞೋಯಿಸ ಸುಬ್ರಾಯ ಪಂಡಿತರು ಬಂದು ಹುಟ್ಟಿನ ಹೊತ್ತನ್ನು ತಿಳಿದು ಚೀಲದಿಂದ ಪಂಚಾಂಗ, ಕಾಗದ ಮತ್ತು ಪೆನ್ಸಿಲು ತೆಗೆದು ಮಗುವಿನ ವಿಧಿ ಪರೀಕ್ಷೆ ಮಾಡಲು ತೊಡಗಿದರು. ಅವರು ಭವಿಷ್ಯ ಹೇಳಿದ ಅನೇಕ ವಿಷಯಗಳು ಯಾರ ನೆನಪಿನಲ್ಲೂ ಇಲ್ಲ. ಆದರೆ ಮಗುವಿನ ಜನ್ಮ ಮಾತಾಪಿತರಿಗೆ ಅಸುಖವೆಂದುದು ಮಾತ್ರ ಕೆಲವರ ಮನಸ್ಸಿನಲ್ಲಿ ಇನ್ನೂ ನೆನಪಿದೆಯಂತೆ—ಅದು ನಿಜವಾದುದರಿಂದ.

ಶಂಕರನು ಹುಟ್ಟಿದುದು ಹಿಂದೂ ಕುಟುಂಬದ ಉಚ್ಚ ವರ್ಣದ ಒಂದು ಕುಲದಲ್ಲಿ. ಹಿಂದೂ ಕುಟುಂಬವೆಂದ ಮೇಲೆ ಆ ಸಮಾಜದ ಶ್ರೇಷ್ಠ ಗುಣಗಳು ಅದರಲ್ಲಿ ಮಿಶ್ರವಾಗಿದ್ದುವು ಎಂದು ಒತ್ತಿ ಹೇಳುವ ಅವಶ್ಯವಿಲ್ಲ.

ಈ ಸಮಾಜದ ಮೂಲಭೂತ ಗುಣವೆಂದರೆ ಸಹಿಷ್ಣುತೆ. ಬಲು ಹಿಂದಿನ ಕಾಲದಿಂದ ಇಂದಿನವರೆಗೂ ಹಿಂದೂ ಜನ ಈ ಒಂದು ಗುಣವನ್ನು ಬಂಗಾರದಂತೆ ಕಾಯ್ದುಕೊಂಡು ಬಂದಿದ್ದಾರೆ. ಮಧ್ಯ ಯುಗದಲ್ಲಿ ಪಶ್ಚಿಮದಲ್ಲಿ ಮನುಷ್ಯರು ಜಾತಿ, ವರ್ಣ, ಧರ್ಮ, ಮತಗಳಿಗಾಗಿ ಕ್ಷುದ್ರ ಕಲಹಗಳಲ್ಲಿ ನಿರತರಾಗಿದ್ದಾಗ, ನಮ್ಮ ಜನರು, ಎಲ್ಲ ಮತದ ಎಲ್ಲೆಡೆಯ ಜನರನ್ನೂ ಸ್ವಾಗತಿಸಿ ಮನ್ನಣೆಯಿತ್ತರು. ಇಂದು ನೈತಿಕ ಸ್ಥಿತಿ ಎಷ್ಟೇ ನಿಮ್ನವಿದ್ದರೂ ಈ ಗುಣವು ಒಂದಲ್ಲ ಒಂದು ರೂಪದಲ್ಲಿ ಸೇರಿಕೊಂಡಿದೆ. ಇಂದಿನ ಹಿಂದುಗಳು ಕೂಡ ಅತಿ ಸಹಿಷ್ಣುಗಳು. ಎಲ್ಲ ರೀತಿಯ ಸಾಮಾಜಿಕ ಅನ್ಯಾಯಗಳನ್ನೂ ಇವರು ಸಹಿಸುತ್ತಾರೆ. ಅಸ್ಪೃಶ್ಯತೆ, ದಾರಿದ್ರ್ಯ, ಅಜ್ಞಾನ, ಬಾಲವಿಧವೆಯರ ಮೇಲೆ ಒತ್ತಾಯದ ಸನ್ಯಾಸ, ಇವೆಲ್ಲ ಪದ್ಧತಿಗಳೂ ತಮ್ಮ ಉಳಿವಿಗೆ ಹಿಂದೂ ಸಮಾಜದ "ಸಹಿಷ್ಣುತೆ" ಎಂಬ ಗುಣಕ್ಕೆ ಋಣಿಯಾಗಿವೆ. ಯಾರಾದರೂ ಒಬ್ಬ ಮಹಾಪುರುಷನು ಅಜ್ಞಾನ, ದಾರಿದ್ರ್ಯ, ಜಾತಿ ದ್ವೇಷ, ವಿಧವಾಯಾತನೆಗಳನ್ನು ಸಹಿಸದೆ ಅವುಗಳ ವಿರುದ್ಧ ಅಹಿಂಸಾತ್ಮಕ ಯುದ್ಧ ಹೂಡಿದರೆ, ಆತನನ್ನು ಸುಖವಾಗಿ ಗುಂಡಿನ ಬಾಯಿಗಿತ್ತು ಬಳಿಕ ಆ ಘಟನೆಯನ್ನು ಎಲ್ಲೆಡೆಯಲ್ಲೂ, ಸಮಿತಿಗಳ ಮೂಲಕ ಸ್ಮಾರಕ ಮಾಡಿ ತಮ್ಮ ಮೂಲಭೂತ ಗುಣಕ್ಕೆ ಬಾಧೆ ಬಾರದಂತೆ ನೋಡಿಕೊಳ್ಳುತ್ತಾರೆ.

ಇಂಥ ಸಮಾಜದಲ್ಲಿ ಹುಟ್ಟಿದ ಶಂಕರನ ತಂದೆ ತಾಯಿಗಳಿಬ್ಬರೂ ಈತನ ಬಾಲ್ಯದಲ್ಲೇ ತೀರಿಕೊಂಡರು. ತಂದೆ ತೀರಿದ ದಿನ ಈತನ ಅಜ್ಜಿ ಈತನ ತಲೆಗೆ ಜಲ-ಸ್ನಾನ ಮಾಡಿಸುತ್ತಿದ್ದಾಗ, ಇಂದೇಕೆ ತಲೆಗೆ ನೀರು? ಎಂದು ಎಂದು ಶಂಕರ ಕೇಳಿದ. ಆಕೆ "ಅದು ನಿನ್ನ ತಂದೆ ಇಂದು ತೀರಿ ಹೋದರು" ಎಂದು ಹೇಳುವಷ್ಟರೊಳಗೆ ಆತನು "ಹೌದು ನನಗೆ ತಿಳಿದಿದೆ" ಎಂದನು. ಇದನ್ನು ಆ ಮಹನೀಯ ಹೆಂಗುಸರ ಪಾರ್ಲಿಮೆಂಟಿನಲ್ಲಿ ಪ್ರಚುರಪಡಿಸಿ, ಎಲ್ಲರೂ ಕೂಡಿ, ಹುಡುಗನಿಗೆ ತಂದೆಯ ಸಾವಿನಿಂದ ಬಲು ಸಂತೋಷವಾಗಿದೆಯೆಂದೂ ಇಲ್ಲದಿದ್ದರೆ "ನನಗೆ ತಿಳಿದಿದೆಯೆಂದು" ಹೇಳದೆ ಅಳುತ್ತಿದ್ದಿರಬೇಕೆಂದೂ ಸಾವಿಗೆ ಆತನ ಮನಸ್ಸೇ ಕಾರಣವೆಂದೂ ಸಿದ್ಧಾಂತ ಮಾಡಿದರು. ಇದಕ್ಕೆ ಪವಿತ್ರವಾದ ಜ್ಯೋತಿಷ್ಯದ ಬೆಂಬಲವೂ ಸಿಕ್ಕಿತ್ತು ಹೆಂಗುಸರಿಗೆ.

ಈ ಬಹಿರಂಗ ಆರೋಪವು ಬಾಲಕನ ಮನಸ್ಸಿನಲ್ಲಿ ವಿಚಿತ್ರ ಆಂದೋಲನಗಳನ್ನೆಬ್ಬಿಸಿತು. ಬಾಲ್ಯಕಾಲದಲ್ಲಿ ಮನಸ್ಸೆಂಬುದು ಮಯಣದಂತೆ. ಅದು ಅಸಿದ್ಧ ಪದಾರ್ಥ. ಪರಿಸ್ಥಿತಿಯ ಹೊಡೆತವು ಆ ಮಯಣವನ್ನು ವಿವಿಧ ರೀತಿಯಲ್ಲಿ ಮಾರ್ಪಡಿಸಿ ಗೊಂಬೆ ಮಾಡುವ ಹೊತ್ತಿಗೆ ಬಾಲ್ಯ ಹೋಗಿ ಹಿರಿತನ ಬರುತ್ತದೆ. ಶಂಕರನ ಮನಸ್ಸಿನಲ್ಲಿ ಮೇಲಿನ ಆರೋಪವು ನಿರ್ದಯವಾಗಿ ನಾಟಿಕೊಂಡಿತು. ಮನೆಯ ಕರು ಸತ್ತಾಗಲೂ "ನಿನ್ನ ಮನಸ್ಸಿನಲ್ಲಿ ಅದು ಬೇಗ ಸಾಯಲಿ ಎಂದಿದ್ದುದರಿಂದಲೇ, ಅದು ಸತ್ತಿತು," ಎಂಬ ಆರೋಪವೂ ಅಜ್ಜಿ ಮತ್ತು ಉಳಿದ ಹೆಂಗುಸರಿಂದ ಬಂತು. ಶಂಕರನಿಗೆ, ಬಂಧುಗಳ ಜನನ ಮರಣವೆಂಬುದು, ಈ ಹೆಂಗುಸರು ಹೇಳುವಂತೆ ತನ್ನ ಇಚ್ಛಾಶಕ್ತಿಯ ಅಧೀನವಿದೆಯೆ ಎಂದು ಪರೀಕ್ಷಿಸುವ ಕುತೂಹಲವಾಯಿತು. ತಕ್ಷಣದಿಂದಲೇ ಅಜ್ಜಿ [ಈ ಅಜ್ಜಿ ಆತನಿಗೆ ಸ್ವಲ್ಪ ದೂರದ ಸಂಬಂಧಿ. ಅವಿಭಕ್ತ ಕುಟುಂಬದಲ್ಲಿ ಈ ಸಂಬಂಧಗಳು ಅನೇಕ ಇವೆ] ಸಾಯಲಿ ಎಂದು ಪ್ರತಿದಿನವೂ ಧ್ಯಾನ ಮಾಡಲು ತೊಡಗಿದನು. ತಿಂಗಳೊಂದು ಸಂದಿತು, ಮುದುಕಿಗೆ ಯಾವ ಕುತ್ತೂ ಅಂಟಲಿಲ್ಲ. ಅದನ್ನು ಬಿಟ್ಟು ಇನ್ನೊಂದು ತಿಂಗಳು ತನ್ನ ಮಲತಾಯಿ ಸಾಯಲಿ ಎಂದು ಮನಸ್ಸಿನಲ್ಲೇ ಜಪಿಸತೊಡಗಿದನು. ಇದೂ ನಿಷ್ಫಲವಾಯಿತು. ಇನ್ನು ಮಲತಾಯಿಯ ನಾಲ್ಕು ವರ್ಷದ ಮಗುವಿನ ಜೀವ ಪರೀಕ್ಷೆಯನ್ನಾದರೂ ಮಾಡಿಬಿಡುತ್ತೇನೆ ಎಂದು ಆ ವಿಷಯ ಧ್ಯಾನಮಾಡತೊಡಗಿದನು. ಆದರೆ ತನ್ನ ಜೀವ ಬಡಕಲಾಗುತ್ತಿತ್ತೇ ಹೊರತು, ಮಗುವು ಶುಕ್ಲ ಪಕ್ಷದ ತಿಂಗಳಂತೆ ಬೆಳೆಯುತ್ತಿತ್ತು. ಮಲತಾಯಿ, ನೆರೆಯ ಹೆಂಗುಸರಲ್ಲೆಲ್ಲಾ ಕಣ್ಣೀರಿಡುತ್ತಿದ್ದಳು. "ತಾನು ಎಷ್ಟು ಚೆನ್ನಾದ ಆಹಾರಕೊಟ್ಟರೂ ಮಾಣಿ ಬತ್ತುತ್ತಿದ್ದಾನಲ್ಲ" ಎಂದು.

ಹೀಗೆ ಅನೇಕ ಪ್ರಯೋಗಗಳನ್ನು ಮಾಡಿ, ಶಂಕರನು, ತಾನು ಭಗವಂತನಲ್ಲ-ಜನರ ಸಾವು ಹುಟ್ಟುಗಳು ತನ್ನ ಇಚ್ಛಾಧೀನವಾಗಿಲ್ಲ, ಮನೆಯ ಹೆಂಗುಸರು ತನ್ನ ಮೇಲಿನ ಅಪ್ರೀತಿಯಿಂದ ಮೇಲಿನ ಸುಳ್ಳು ಅಪಾದನೆಗಳನ್ನು ತರುತ್ತಾರೆ ಎಂಬುದನ್ನು ಕಲಿತುಕೊಂಡನು. ಅಂದಿನಿಂದ ಹಿರಿಯ ಹೆಂಗಸರು, ಸುಳ್ಳು ಹೇಳುತ್ತಾರೆ ಎಂದು ಖಚಿತವಾದಂದಿನಿಂದ ಅವನಿಗೆ ಸ್ತ್ರೀಕುಲದ ಮೇಲೆ ಒಂದು ವಿಧದ, ಭೀತಿಮಿಶ್ರಿತ ತಿರಸ್ಕಾರ ಹುಟ್ಟಿತು. "ಸ್ತ್ರೀ" ಎಂದರೆ ತನ್ನನ್ನು ದ್ವೇಷಿಸುವ, ಯಾವಾಗಲೂ ತನ್ನ ನಡತೆಯ ಮೇಲೆ ಆರೋಪ ಹೊರಿಸಲು ಸಂದರ್ಭ ಕಾಯುತ್ತಿರುವ ಒಂದು ಭೀಕರ ಜಂತು ಎಂಬ ಅಭಿಪ್ರಾಯವೂ ಚಿತ್ತ ಭಿತ್ತಿಯಲ್ಲಿ ಸೇರಿಕೊಂಡಿತು. ಈ ಪರಿಣಾಮದ ಅವಶೇಷಗಳು ಇನ್ನೂ ಅವನ ಸ್ವಭಾವದಿಂದ ಮಾಸಿಲ್ಲ.

ಇದು ಈತನ ವಿವಾಹ ಪ್ರಶ್ನೆಯಲ್ಲಿ ನಾನು ಕೈಹಾಕಿದಾಗ ಸ್ಪಷ್ಟವಾಗಿ ತಿಳಿಯಿತು. "ಏನಯ್ಯ, ಇಪ್ಪತ್ತಾರು ವರ್ಷವಾಯಿತು, ವಿರಕ್ತನಂತೆ ಜೀವನ ನಡೆಸುತ್ತಿ, ಮದುವೆಯಾಗುವ ವಿಚಾರ ಮಾಡು" ಎಂದು ಸೂಚಿಸಿದಾಗ, ಏಕಾಂತದಲ್ಲಿ ನನ್ನನ್ನು ಕರೆದು ಗಂಭೀರವಾಗಿ "ಸ್ತ್ರೀಯರು ವಿಶ್ವಸನೀಯರಲ್ಲವೆಂದು ನನ್ನ ಅಭಿಪ್ರಾಯ. ನಿನಗೆ ಹೇಗೆ ತೋರುತ್ತದೆ?" ಎಂದು ಪ್ರಶ್ನೆ ಮಾಡುತ್ತಾನೆ. ನಾನು ಏನೆನ್ನಲಿ! ನನಗಂತೂ ಮದುವೆಯಾಗಿದೆ, ಬಹಳ ಪ್ರೇಮದ ಹುಡಗಿ, ಅತಿ ವಿಶ್ವಾಸ ಯೋಗ್ಯಳು ಎಂದು ನನ್ನ ದಾಂಪತ್ಯ ಜೀವನದ ಅನುಭವವನ್ನು ಹೇಳಿ ಆತನ ದುರಭಿಪ್ರಾಯವನ್ನು ನಿವಾರಿಸಲು ಪ್ರಯತ್ನಿಸಿದರೆ, ಆತನ ಪೂರ್ವಾನುಭವದ ಸಂಸ್ಕಾರಗಳೇ ಬೇರೆ. ಹಸುಳೆಯ ಮೇಲೆ ಕೊಲೆಯ ಮಿಥ್ಯಾರೋಪ ಮಾಡುವ ಹೆಂಗುಸರನ್ನು ಕಂಡವನಿಗೆ ಸ್ವಾಭಾವಿಕವಾಗಿ ಕನ್ಯೆಯರಲ್ಲೂ ಅವಿಶ್ವಾಸವಿದ್ದರೆ ಅಚ್ಚರಿಯೇನು? ಅನೇಕ ಸುಂದರಿಯರನ್ನು ಕಂಡಾಗ ಅವರನ್ನು ಸ್ನೇಹಿಸುವ ಮನಸ್ಸಾಗುತ್ತದೆ ಅವನಿಗೆ. ಆದರೆ, ತನ್ನ ಸ್ನೇಹಪರೀಕ್ಷೆಗೆ ಅವರು ಒಂದಕ್ಕೆ ಹತ್ತು ಅಪಾರ್ಥ ಮಾಡಿ ಸಮಾಜದಲ್ಲಿ ತನ್ನ ಸ್ಥಿತಿಯನ್ನು ಪಶುವಿಗಿಂತಲೂ ಕೀಳುಮಾಡಲಾರರೇ, ಎಂಬ ಭೀತಿಯಿಂದ ಬಲುಸರ್ತಿ, ಕ್ಲಾಸಿನ ವಿದ್ಯಾರ್ಥಿನಿಯರು ಈತನನ್ನು ನೋಡಿ ಮುಗುಳುನಕ್ಕಾಗಲೂ ಮೋರೆ ತಿರುಗಿಸಿ, ವೈರಾಗ್ಯ ತಾಳುತ್ತಿದ್ದನು.

ಈಗ ಕೆಲ ಸಮಯದಿಂದ ಈತನು ಒಂದು ಹೊಸ ಅಭಿಪ್ರಾಯ ಪಡೆದಂತೆ ತೋರುತ್ತದೆ. ಹಿಂದೂ ಸಮಾಜದಿಂದ ಮದುವೆಯಾಗಲು, ಅದರಲ್ಲೂ ತಾನು ಹುಟ್ಟಿದ ಬ್ರಾಹ್ಮಣ ಸಮಾಜದಿಂದ ಮದುವೆಯಾಗಲು ಸಾಧ್ಯವೇ ಇಲ್ಲವೆಂದೂ ಇದರಿಂದ, ಸಮಾಜ ಸುಧಾರಕರು ಪ್ರಚಾರ ಪಡಿಸುತ್ತಿರುವ ಮಿಶ್ರ ವಿವಾಹ ಮಾಡಿಕೊಂಡರೆ, ಸಮಾಜಸುಧಾರಣೆಯೂ ಆಯಿತು, ತನ್ನ ಬಯಕೆಗೂ ದಾರಿಯಾಯಿತು ಎಂದೂ ತನ್ನ ಮಿತ್ರರಲ್ಲಿ ಆಡಿಕೊಳ್ಳುತ್ತಾನೆ.

ಆದರೆ ಈತನ ತಾರುಣ್ಯ ಸಹಜವಾದ ಅಭಿಲಾಷೆಗೂ ಪೂರ್ವ ಸಂಸ್ಕಾರದ ಸ್ತ್ರೀಅವಿಶ್ವಾಸಕ್ಕೂ ಘೋರ ಸಂಘರ್ಷಣವಾಗುತ್ತಿದೆ. ಯಾವುದಾದರೂ ಯೋಗ್ಯ ಸ್ತ್ರೀ ತನ್ನಲ್ಲಿಗೆ ಬಂದು "ಶಂಕರ, ನನಗೆ ನಿನ್ನಲ್ಲಿ ಅಪಾರ ಪ್ರೇಮವಿದೆ. ವಿಶ್ವಾಸವಿದೆ, ಇದು ಅಚಲವಾದುದು. ನಾವು ಇಬ್ಬರೂ ಮದುವೆಯಾಗುವ" ಎಂದು ನುಡಿವವರೆಗೂ ಸ್ತ್ರೀಯನ್ನು ದೃಷ್ಟಿಸುವುದಿಲ್ಲ, ಆಕಸ್ಮಾತ್ ನೋಡಿದರೂ ಮಾತನಾಡುವ ಅಭಿಲಾಷೆಯನ್ನು ಮುಖಭಾವದಲ್ಲಿ ತೋರಿಸುವುದಿಲ್ಲ ಎಂದೂ ಆತನು ಪ್ರತಿಜ್ಞೆ ಮಾಡಿದಂತೆ ತೋರುತ್ತದೆ. ಆದರೆ ತಾನಾಗಿಯೇ ಪ್ರಣಯಾತುರೆಯಾಗುವುದು ಸ್ತ್ರೀ ಸ್ವಭಾವಕ್ಕೆ ಅಸಹಜವೆಂದೂ ಪುರುಷನಿಂದಲೇ ಪ್ರಥಮ ಪ್ರಯತ್ನ ನಡೆಯಬೇಕೆಂದೂ ಹಲವು ಹ್ಯಾವಲಕ್ ಎಲಿಸರಂಥವರು ಬರೆದ ಗ್ರಂಥಗಳನ್ನು ತೋರಿಸಿ, ಈತನ ಚಿತ್ತಪರಿವರ್ತನ ಮಾಡಲು ನಾನು ಪಟ್ಟ ಪ್ರಯತ್ನಗಳಿಂದ ಹೆಚ್ಚು ಫಲದೊರೆಯಲಿಲ್ಲ. ಈಗ ಇನ್ನೊಂದು, ಸಿಗ್ಮಂಡ್ ಫ್ರಾಯಿಡರ ಮನಃಶಾಸ್ತ್ರಗ್ರಂಥವನ್ನು ಅವನಿಗಾಗಿಯೆ ತೆಗೆದುಕೊಂಡಿದ್ದೇನೆ. ನೋಡಬೇಕು, ಪ್ರಯತ್ನದ ಫಲವನ್ನು.

ಏನಾದರೂ ಹೆಚ್ಚು ಕಾಲ ಈತನ ಕಷ್ಟ ಉಳಿಯಲಾರದು. ಇಂದಿನ ಜಗತ್ತೆಲ್ಲವೂ, ಪುರುಷಾಕರ್ಷಣಕ್ಕಾಗಿ ನಾರಿಯರೊಡ್ಡಿದ, ಬಲೆ, ಗಾಳ, ಗೂಡುಗಳಿಂದ ತುಂಬಿರುವಲ್ಲಿ ಈತನು ಅದರಲ್ಲಿ ಸೆರೆಗೊಳ್ಳದೆ ಹೆಚ್ಚು ಕಾಲ ಸನ್ಯಾಸಿಯಂತಿರಲಾರನು. ಆತನೂ ನಿರಾಶೆಯ ಮಧ್ಯದಲ್ಲೂ ಆಶಾವಾದಿ. ತನ್ನ ಪೂರ್ವಸಂಸ್ಕಾರಗಳನ್ನು ಕ್ರಮೇಣ ವಿವೇಕದಿಂದ ಸರಿಗೊಳಿಸಿ ಬಹುದೆಂಬ ಆಶೆ ಕೆಲವೊಮ್ಮೆ ಅತನ ಮಾತುಗಳಿಂದ ಹೊಳೆಯುತ್ತದೆ. "ನನ್ನದು ಜೀವವಿಲ್ಲದ ಜೀವನ ನಿರಾಶೆಯ ಕತ್ತಲಲ್ಲಿದ್ದರೂ, ಆಶಾತಾರೆಯನ್ನು ನಿರೀಕ್ಷಿಸುತ್ತೇನೆ." ಎಂದು ದಿನವೂ ನನ್ನಲ್ಲಿ ನಿಟ್ಟುಸಿರಿಡುತ್ತಾನೆ.

# ಏಶಿಯದಲ್ಲಿ ಪಾಶ್ಚಾತ್ಯರ ಅಧಿಕಾರಕ್ಕೆ ಕೊನೆ

## ಪ್ರಜಾಸತ್ತೆಯತ್ತ ಒಲೆತ-- ಸಂಯುಕ್ತರಾಜ್ಯಯೋಜನೆ ವ್ಯರ್ಥಭಯ—ಭಾರತದ ದೂರದರ್ಶನ— ಅಮೇರಿಕ ಕೊಡತಕ್ಕ ಸಹಾಯ

**ಏಶಿಯದಲ್ಲಿ ಸಂಪೂರ್ಣ ಹೊಸದಾದ ಒಂದು ಜಗತ್ತು ನಿರ್ಮಾಣವಾಗುತ್ತಲಿದೆ. ಜಗತ್ತಿನ ಯಾವ ಶಕ್ತಿಯೂ ಅದನ್ನು ತಡೆಯಲಾರದು, ನಿರ್ದೇಶಿಸಲಾರದು. ರಶಿಯವು ೨೦೦ ಕೋಟಿಯಷ್ಟಿರುವ ಏಶಿಯನ್ನರ ಪ್ರವಾಹದ ನೇತೃತ್ವವನ್ನು ವಹಿಸೀತೆಂದು ಊಹಿಸಿದರೆ ಅದಕ್ಕೆ ಇರುವುದಕ್ಕಿಂತ ಹೆಚ್ಚು ಶಕ್ತಿಯನ್ನೂ ಉದ್ದೇಶವನ್ನೂ ನಾವು ಕಲ್ಪಿಸಿದಂತಾದೀತು. ಯುದ್ಧ ಅಥವಾ ಶಾಂತಿಯ ಎಲ್ಲ ಪ್ರಶ್ನೆಗಳನ್ನೂ ಇತ್ಯರ್ಥಪಡಿಸುವದು ಯುರೋಪಿನ ಕೈಯೊಳಗಿಲ್ಲ; ತಮಗೆ ಶಕ್ತಿಯಿದೆ ಎಂಬ ಜ್ಞಾನವೇ ಇಲ್ಲದ ಏಶಿಯದ ಕೋಟಿಗಟ್ಟಲೆ ಮನುಷ್ಯರ ಕೈಯಲ್ಲಿ ಸಾಮರ್ಥ್ಯದ ಸಮತೋಲ ಅಡಗಿದೆ—ಎಂದು ಅಮೇರಿಕದ ಪ್ರಸಿದ್ಧ ಲೇಖಕರಾದ ರಾಬರ್ಟ್ ಪೇನರು "ಯುನೈಟೆಡ್ ನೇಶನ್ಸ್‌ವರ್ಲ್ಡ್" ಎಂಬ ಪತ್ರಿಕೆಯಲ್ಲಿ ಬರೆದಿದ್ದಾರೆ.**

ಏಶಿಯದಲ್ಲಿ ದಶದಿಶೆಗಳಲ್ಲಿ ಉಕ್ಕಿ ಹರಿಯುತ್ತಿರುವ ಪ್ರಚಂಡ ಶಕ್ತಿಗಳು ಪ್ರಜಾಸತ್ತೆಯತ್ತ ಸಾಗಿವೆ. ಮಾನವತ್ವದ ಗೌರವಕ್ಕೆ ಅವಕಾಶ ಕೊಡುವ ಮತ್ತು ಅದನ್ನು ಅದನ್ನು ಪ್ರೋತ್ಸಾಹಿಸುವ ಸತ್ತೆಯೆಂದರೆ ಪ್ರಜಾಸತ್ತೆಯೇ. ಪ್ರಜಾಸತ್ತೆಯನ್ನು ಸುಲಭವಾಗಿಯೂ ಸ್ವಯಂಸ್ಫೂರ್ತಿಯಿಂದಲೂ ಏಶಿಯಕ್ಕೆ ಹೊಂದಿಸಬಹುದು. ಆ ದಿಶೆಯಲ್ಲಿ ಅಮೇರಿಕ ತನ್ನ ನಿಜವಾದ ಶಕ್ತಿಯನ್ನು ವಿನಿಯೋಗಿಸಿ ಪ್ರದರ್ಶಿಸಬಹುದು.

ಬದಲಾವಣೆಗಳ ಕಾಲ ಏಶಿಯದಲ್ಲಿ ಮುಗಿದಿಲ್ಲ. ಅಲ್ಲಿಯ ಸದ್ಯದ ರಾಜ್ಯಗಳು ಬಹಳ ಕಾಲ ಬಾಳಲಾರವು. ಸಾಮಾಜಿಕ ಆಂದೋಲನಗಳ ಬಿಗುಮಾನ ಹೆಚ್ಚಿರುವ ಅಲ್ಲಿ ರಾಜ್ಯಗಳು ಒಕ್ಕೂಟವನ್ನು ರಚಿಸಿಕೊಳ್ಳುವ ಪ್ರವೃತ್ತಿ ಉಂಟಾಗಿದೆ. ಸಂಯುಕ್ತ ರಾಜ್ಯಸ್ಥಾಪನೆಯ ಪ್ರಯತ್ನ ಏಶಿಯದಲ್ಲೀಗ ನಡೆದಿದೆ. ಅದು ಅನಿರ್ದಿಷ್ಟ ಕಾಲಾವಧಿ ಮುಂದೆ ಹಾಕಲ್ಪಡುವ ಸಂಭವವಿಲ್ಲ.

### ಒಕ್ಕೂಟದ ಯೋಜನೆ

ಸಯಾಮಿನ ಥಿಯಂಗ್ ಸಿರ್ನನಾನ ಲಿಯೋಸಿನ ರಾಜ ಸೂಪ್ಹನೀವಾಂಗ್ ಮತ್ತು ವಿಯಟ್ನಾಮಿನ ಲೇಹಿ ಇವರ ಆಶ್ರಯದಲ್ಲಿ ಸಂಯುಕ್ತ ರಾಜ್ಯಸ್ಥಾಪನೆಗಾಗಿ ಸ್ಥಾಪಿಸಲ್ಪಟ್ಟ ಸಂಘದ ಯೋಜನೆಯನ್ವಯ ಬ್ರಹ್ಮದೇಶ, ಸಯಾಂ, ಇಂಡೋಚೀನ, ಜಾವಾ, ಸುಮಾತ್ರ, ಬೋರ್ನಿಯೋ, ಆಸ್ಟ್ರೇಲಿಯದ ಉತ್ತರಕ್ಕಿರುವ ದ್ವೀಪಗಳು ಮತ್ತು ಫಿಲಿಪ್ಪೈನ್ಸ್ ಒಟ್ಟು ಸೇರಿ ೧೫ ಕೋಟಿ ಜನಸಂಖ್ಯೆಯ ಒಂದು ಹೊಸ ರಾಷ್ಟ್ರ ನಿರ್ಮಾಣವಾಗಲಿದೆ. ಈ ಸಂಯುಕ್ತ ರಾಜ್ಯದ ಸ್ಥಾಪನೆ ದೂರವಿದೆ. ಸಯಾಂ, ಬ್ರಹ್ಮದೇಶ ಮತ್ತು ಫಿಲಿಪ್ಪೈನ್ಸ್ ಸ್ವತಂತ್ರವಾಗಿವೆ. ಇಂಡೋನೇಶಿಯದ ಭಾಗಗಳೂ ಸ್ವತಂತ್ರವಾಗಿವೆ. ಡಚ್ಚರೊಡನೆ ಅವರ ಯುದ್ಧ ಬಹಳ ದಿನ ನಡೆಯಲಾರದು.

ಸರ್ವ ಸಾಮಾನ್ಯ ಹಿತಸಂಬಂಧಗಳ ಮೇಲಿಂದ ಶಿಥಿಲವಾಗಿ ಹುಟ್ಟುವ ಸಂಯುಕ್ತ ರಾಜ್ಯ ಕೆಲವೇ ಕಾಲದಲ್ಲಿ ತನ್ನ ಅಪಾರವಾದ ಸಂಪತ್ತಿನ ಬಲದಿಂದ ದುರ್ಜಯವಾಗಿ ತಲೆಯೆತ್ತುವುದು ಸಾಧ್ಯವಿದೆ. ಅಕ್ಷರ ಪ್ರಸಾರ ಏಶಿಯದ ರಾಷ್ಟ್ರಗಳಲ್ಲಿ ಹೆಚ್ಚುತ್ತಿದೆ; ಜನಸಂಖ್ಯೆ ಬೆಳೆಯುತ್ತಿದೆ. ಪ್ರತಿವರ್ಷ ಜಪಾನೊಂದರಲ್ಲೇ ಸುಮಾರು ೨೭ ಲಕ್ಷ ಹೊಸ ಮಕ್ಕಳು ಹುಟ್ಟುತ್ತಾರೆ. ಭಾರತದ ಮರಣಸಂಖ್ಯೆಯನ್ನು ಅಮೇರಿಕದ ಮಟ್ಟಕ್ಕಿಳಿಸಿದರೆ, ಭಾರತ ತನ್ನ ಇಂದಿನ ಹುಟ್ಟುವ ಮಕ್ಕಳ ಸಂಖ್ಯಾಪ್ರಮಾಣದಿಂದ ೫ ಜಗತ್ತುಗಳನ್ನು ತುಂಬಬಲ್ಲುದು. ಏಶಿಯದ ಜನನಪ್ರಮಾಣದ ಸಮಸ್ಯೆ ಬಹು ದೊಡ್ಡದು. ಆದುದರಿಂದ ಏಶಿಯನ್ನರು ಆಫ್ರಿಕ, ಆಸ್ಟ್ರೇಲಿಯ ಮತ್ತು ನ್ಯೂಜಿಲೆಂಡುಗಳಲ್ಲಿ ಹೋಗಿ ನೆಲಸಬಹುದಾಗಿದೆ.




ವಿವರಗಳಿಗೆ ೧೧ ನೆಯ ಪುಟದಲ್ಲಿರುವ "ಅಟ್ಲಾಂಟಿಕ್ ಒಪ್ಪಂದದ ಪೂರ್ಣಪಾಠ" ವನ್ನು ನೋಡಿರಿ.

### ಭಯಕ್ಕೆ ಕಾರಣವಿಲ್ಲ

ಏಶಿಯನ್ನರ ಒಕ್ಕೂಟವು ಪಾಶ್ಚಾತ್ಯರಿಗೆ ಅನಿವಾರ್ಯವಾಗಿ ಭಯಂಕರವೆನಿಸುವ ಸಂಗತಿಯಲ್ಲ. ಏಶಿಯದಿಂದ ಇತ್ತೀಚೆಗೆ ತಿರುಗಿ ಬಂದ ವಿಲಿಯಂ ಸಿ. ಬುಲಿಟ್ಟನು ಸ್ಟಾಲಿನ್ನರು "೪೫ ಕೋಟಿ ಚೀನೀಯರನ್ನೂ ಎಲ್ಲ ಅರಬರನ್ನೂ, ಫ್ರೆಂಚ್ ಇಟಾಲಿಯನ್ ಜರ್ಮನ್ ಪೋಲಿಶ್ ಸ್ಕ್ಯಾಂಡಿನೇವಿಯನ್ ಜನರನ್ನೂ ಅಮೇರಿಕದ ವಿರುದ್ಧ ಸಂಘಟಿಸಲಿದ್ದಾರೆ" ಎಂದು ಹೇಳಿದ್ದು ಸಂಪೂರ್ಣ ಅಜ್ಞಾನಜನ್ಯವಾದ ಮಾತು. ಏಶಿಯದ ವಿಕಾಸವು ಒಂದು ವಿಧದ ಸಾಮ್ಯವಾದೀ ಪ್ರಜಾಸತ್ತೆಯ ಹಾದಿಯಲ್ಲಿ ನಡೆದಿದೆ ಇನ್ನು ಮೇಲೆ ಪರಸ್ಪರರ ಅದೃಶ್ಯ ಸಂಬಂಧಗಳನ್ನು ಕಂಡುಕೊಂಡ ಏಶಿಯನ್ನರಲ್ಲಿ ಬಣಬಣಗಳಲ್ಲಿ ಭೇದ ಬಿತ್ತಿ ಆಳುವುದು ಸಾಧ್ಯವಿಲ್ಲ.

ಚೀನದ ಕಮ್ಯುನಿಜಂ ಸಹಜ ಸಾಮಾಜಿಕ ವಿಕಾಸದ ಫಲವಲ್ಲ; ಅದು ಕುಮಿಂಟಾಂಗ್ ಸರಕಾರದ ಜಾಗಿರದಾರಿ [Feudalism] ಅಧಿಕಾರತಾರತಮ್ಯದ ವಿರುದ್ಧವಾಗಿ ಹೊರಟದ್ದು. ರಶಿಯಕ್ಕೆ ಏಶಿಯದ ಮೇಲೆ ಕಣ್ಣಿಲ್ಲವೆಂದು ಯಾರೂ ಹೇಳಲಾರರು. ಏಶಿಯದಲ್ಲಿ ಪ್ರವೇಶಿಸಲು ರಶಿಯ ಯುದ್ಧವೊಂದು ಹೊರತಾದ ನಾನಾ ಪ್ರಯತ್ನಗಳನ್ನು ಮಾಡುತ್ತಿದೆಯೆಂಬುದಕ್ಕೆ ಸೈಬೀರಿಯ ಮತ್ತು ಮಾಸ್ಕೋದಲ್ಲಿರುವ ಕಾಲೇಜುಗಳಲ್ಲಿ ೯೦೦೦ ಏಶಿಯನ್ ವಿದ್ಯಾರ್ಥಿಗಳು ಕಲಿಯುತ್ತಿರುವುದೊಂದು ನಿದರ್ಶನ ಅಲ್ಲದೆ, ಅಫಗಾಣಿಸ್ತಾನ, ತಿಬೇಟ್, ಸಿಂಕಿಯಾಂಗ್ ಮತ್ತು ಮಂಗೋಲಿಯಗಳಲ್ಲಿ ತನ್ನ ಒತ್ತಾಯವನ್ನು ,ಒತ್ತಿರುವುದು ಸ್ಪಷ್ಟವಿದೆ. ಮಂಚೂರಿಯ ಮತ್ತು ಭಾರತಗಳನ್ನು ಹಿಡಿತದಲ್ಲಿಟ್ಟುಕೊಳ್ಳುವುದೇ ರಶಿಯದ ಗುರಿಯೆಂದು ಸಾರಲಾಗಿದೆ. ಆದರೆ ಭಾರತದಲ್ಲಿ ಗಾಂಧಿಯವರ ಭರ್ತ್ಸನದಿಂದಲೂ ಸಾಮ್ಯವಾದಿಗಳ ಪ್ರಚಾರದಿಂದಲೂ ಕಮ್ಯುನಿಜಂ ಹಿನ್ನಡೆ ಹಿಡಿಯಿತು.

ವಿದ್ಯೆ, ವಿದ್ಯುಚ್ಛಕ್ತಿಯ ವಿಜ್ಞಾನ, ಭೂಸಾರಸಂರಕ್ಷಣಜ್ಞಾನ ಮತ್ತು ಧನ ಇವುಗಳನ್ನಿತ್ತು ಅಮೇರಿಕವು ಪೂರ್ವದೇಶಗಳಿಗೆ ಸಹಾಯ ಮಾಡಬಲ್ಲುದು. ಆದರೆ ಹಾಗೆ ಮಾಡುವಾಗ ಅಲ್ಲಿಯ ಸಾಮಾಜಿಕ ಕ್ರಾಂತಿ, ಅರ್ಥಪದ್ಧತಿ, ನಮ್ಮೊಡನೆ ಬದಲಿಸುತ್ತಿರುವ ಏಶಿಯನ್ನರ ಸಂಬಂಧ, ಒಕ್ಕೂಟದ ಆರಂಭಗಳು ಮತ್ತು ಹರಡುತ್ತಿರುವ ಕಮ್ಯುನಿಜಂ ಇವುಗಳನ್ನು ಗಮನಕ್ಕೆ ತಂದುಕೊಳ್ಳಬೇಕು. ಅಧಿಕಾರ ಮತ್ತು ಉತ್ಪಾದನಗಳ ಮೌಲಿಕ ಆಶ್ರಯಗಳು ಖಾಸಗಿ ಉದ್ದಿಮೆದಾರರ ಕೈಯಲ್ಲಿರಬೇಕೆಂಬುದನ್ನು ಏಶಿಯನ್ನರಿಗೆ ಏನುಮಾಡಿದರೂ ಒಪ್ಪಿಸಲು ಸಾಧ್ಯವಿಲ್ಲ. ಏಶಿಯದಲ್ಲಿ ನಮ್ಮ ಕಾಲ ಮುಗಿಯಿತು, ಅವರ ಸೂರ್ಯನೀಗ ಮೂಡುತ್ತಿದ್ದಾನೆ. ಅದನ್ನು ಮುಂದೆ ಹಾಕಬಹುದೆಂದು ಬಗೆದರೆ ನಾವು ಹುಚ್ಚು ಹಿಡಿದ ಜೈತ್ರಯಾತ್ರಿಕರಾದೇವು.!

### ಭಾರತದ ಧುರಂಧರತ್ವ

ಚೀನದ ಕುಮಿಂಟಾಂಗ್ ಸರಕಾರ ರೈತನಿಗೆ ಅನುಕೂಲಮಾಡಿಕೊಡಲಿಲ್ಲ. ಆದರೆ ಭಾರತದಲ್ಲಿ ಒಕ್ಕಲುತನದ ಅನೇಕ ಯೋಜನೆಗಳು ಸಿದ್ಧವಾಗಿವೆ. ಅವುಗಳಲ್ಲಿ ೩೫೦ ಕೋಟಿ ಡಾಲರುಗಳ ಮುಂಬಯಿಯೋಜನೆ ಮುಖ್ಯವಾದುದು. ಹಿಂದು ಮುಸಲ್ಮಾನರ ಕಲಹವಿದ್ದರೂ ಜವಾಹರಲಾಲ ನೆಹರುಗಳು ಯಾವ ತಪ್ಪು ತಡೆಯೂ ಆಗದಂತೆ ಎಲ್ಲವನ್ನೂ ಸಾಗಿಸಿಕೊಂಡು ಹೋಗುವುದಾಗಿ ಪ್ರತಿಜ್ಞೆಮಾಡಿದ್ದಾರೆ. ಇಂಥ ಇಚ್ಛಾಪೂರ್ಣವೂ ದೂರಪರಿಣಾಮಿಯೂ ಆದ ಯೋಜನೆಗಳು ಕಾರ್ಯರೂಪಕ್ಕೆ ಬರುತ್ತಿರುವುದು ಭಾರತ ಒಂದರಲ್ಲೇ.



ಕಾಶ್ಮೀರದ ಸರ್ವಮತಗಣನೆಗೆ ಆಡಳಿತಗಾರರಾಗಿ ನೇಮಿಸಲ್ಪಟ್ಟ ಅಮೇರಿಕದ ಅಡ್ಮಿರಲ್ ನಿಮಿಜ್ ಅವರು. ಇವರು ಜಪಾನರೊಡನೆ ಆದ ಸಾಮುದ್ರ ಯುದ್ಧದಲ್ಲಿ ಬಹಳ ಹೆಸರುವಾಸಿಯಾದವರು.

ಅಮೇರಿಕವು ಸ್ವತಂತ್ರವಾದ ಜಗತ್ತನ್ನು ನೋಡಬೇಕಾದರೆ ಏಶಿಯದ ವಿದ್ಯಾರ್ಥಿಗಳಿಗೆ ತನ್ನ ಯಾಂತ್ರಿಕ ಮತ್ತು ಸಾಮಾಜಿಕ ತಂತ್ರಗಳನ್ನು ಪರಿಚಯಮಾಡಿಕೊಡಬೇಕು. ಏಶಿಯನ್ನರ ಸ್ನೇಹವನ್ನುಗಳಿಸಿದರೆ ಅವರು ಅಮೇರಿಕದ ಮುಂದಿನ ಮಿತ್ರರಾಗುವರು, ಅದರಿಂದ ನಮಗೆ ಇಡೀ ಜಗತ್ತನ್ನೇ ಪಡೆದಷ್ಟು ಲಾಭವಾಗುವುದು.

### ತುಣುಕು ಸುದ್ದಿ

ಇಸ್ರೇಲಿಗೂ ಅರಬರಿಗೂ ನಡುವೆ ಸ್ಥಾಯಿಯಾದ ಒಪ್ಪಂದವಾಗುವ ಸಂಭವ ಕಂಡುಬರುತ್ತಿದೆ. ಆದರೆ ಪಾಲಿಸ್ತಾನದಲ್ಲಿ ಅರಬ ರಾಜ್ಯ ಸ್ಥಾಪಿತವಾಗುವ ಲಕ್ಷಣ ಕಂಡುಬರುವುದಿಲ್ಲ. ಇಜಿಪ್ತ ಟ್ರಾನ್ಸ್ ಜೋರ್ಡನ್ನುಗಳು ಯುದ್ಧ ನಿಲ್ಲಿಸಲು ಒಪ್ಪಿಕೊಂಡಿವೆ. ಸದ್ಯಃ ಪಾಲಿಸ್ತಾನದಲ್ಲಿ ೬೮೦೦ ಚ. ಮೈಲ್ಸ್ ಪ್ರದೇಶ ಇಸ್ರೇಲಿಗಳ ವಶದಲ್ಲಿದೆ. ಈ ಪ್ರದೇಶದಲ್ಲಿ ೮ ಲಕ್ಷ ಇಸ್ರೇಲಿಗಳೂ ೧೦ ಲಕ್ಷ ಅರಬರೂ ಇದ್ದಾರೆ.

× × ×

ಬ್ರಹ್ಮದೇಶದ ೩೫ ರಲ್ಲೂ ಅರ್ಧಕ್ಕಿಂತ ಹೆಚ್ಚು ಜಿಲ್ಲೆಗಳಲ್ಲಿ ದಂಗೆ ದಾಳಿಗಳು ನಡೆಯುತ್ತಿವೆ. ಅವುಗಳಲ್ಲಿ ೧೪ ನ್ನು ದಂಗೆಗಾರರು ವಶಪಡಿಸಿಕೊಂಡಿದ್ದಾರೆ. ಅವುಗಳಲ್ಲಿ ಬಹುಸಂಖ್ಯ ಜಿಲ್ಲೆಗಳು ಇರಾವತಿಯ ಮುಖಜಭೂಮಿಯಲ್ಲೂ ಮಧ್ಯಬ್ರಹ್ಮದಲ್ಲೂ ಇವೆ. ಈ ಕಾರಣದಿಂದ ಬ್ರಹ್ಮೀ ಚುನಾವಣೆಯ ಯೋಜನೆಗಳೆಲ್ಲ ತಲೆಕೆಳಗಾದವು.

× × ×

ಪೂರ್ವಬಂಗಾಲದ ೭೨ ಕುಟುಂಬಗಳ ೩೧೧ ಜನರು ಅಂಡಮಾನ್ ದ್ವೀಪಗಳಲ್ಲಿ ನೆಲಸಲೆಂದು ಹೊರಡಲಿರುವುದಾಗಿ ಸುದ್ದಿ. ೧೦ ದಿನಗಳ ಹಿಂದೆ ೫೦೦ ಜನರು ಅದೇ ಉದ್ದೇಶದಿಂದ ಅಲ್ಲಿಗೆ ಹೋಗಿದ್ದರು.

× × ×

ಸದ್ಯದಲ್ಲಿ ಬ್ರಿಟಿಶ್ ಸರಕಾರವು ಜೆಟ್ಟಿನ ಸಂರಕ್ಷಣಾ ಭಾರವನ್ನು ಹೊರಲು ಅನುಕೂಲಪಡಿಸಿಕೊಡಲೆಂದು ವಿಶೇಷ ಧನಸಹಾಯ ಮಾಡುವುದಾಗಿ ಸಾರಲಿದೆಯೆಂದು ನಿರೀಕ್ಷಿಸಲಾಗಿದೆ.

ಅಮೇರಿಕೆಯಲ್ಲಿ

# ನಿಗ್ರೋಗಳ ಸಮಾನ ಸ್ವಾತಂತ್ರ್ಯ ಹೋರಾಟ

## ಮಹಾತ್ಮಾ ಗಾಂಧಿಯವರ ಅಹಿಂಸಾ ತಂತ್ರದ ಪ್ರಯೋಗ

ಅಮೇರಿಕೆಯಲ್ಲಿ ನಿಗ್ರೋಜನರು ಬಿಳಿಯರಿಗೆ ಸಮಾನವಾದ ನಾಗರಿಕ ಸ್ವಾತಂತ್ರ್ಯವನ್ನು ಸಂಪಾದಿಸಲು ಅಹಿಂಸಾ ತಂತ್ರದ ಪ್ರಯೋಗವನ್ನು ಮಾಡುತಿರುವ ಸುದ್ದಿ ಬಂದಿದೆ. ಈಚೆಗೆ ಮಹಾತ್ಮಾ ಗಾಂಧಿಯವರ ಮಗನಾದ ಶ್ರೀ ದೇವದಾಸ ಗಾಂಧಿಯವರಿಂದ ಆಮಂತ್ರಿಸಲ್ಪಟ್ಟು ಭಾರತಕ್ಕೆ ಬಂದು ಎರಡು ತಿಂಗಳು ಸಂಚರಿಸಿ ಹೋದ ಶ್ರೀ ಬಯಾರ್ಡ ರಸ್ಟಿನ್ನರೆಂಬವರು ಉತ್ತರ ಕೆರೋಲಿನಾದಲ್ಲಿ ಸತ್ಯಾಗ್ರಹ ಮಾಡಿ ೩೦ ದಿನಗಳ ಶಿಕ್ಷೆಯನ್ನು ಅನುಭವಿಸುತಿದ್ದಾರೆ.

ಸಂಯುಕ್ತ ಸಂಸ್ಥಾನ ಅಮೇರಿಕೆಯ ದಕ್ಷಿಣದ ಸಂಸ್ಥಾನ (ಪ್ರಾಂತ)ಗಳಲ್ಲಿ ದಕ್ಷಿಣ ಆಫ್ರಿಕೆಯಲ್ಲಿನಂತೆ ವರ್ಣದ್ವೇಷ ಬಹಳ. ಅಲ್ಲಿಯೂ ಬಿಳಿಯರಿಗೆ ಬೇರೆ, ನಿಗ್ರೋಗಳಿಗೆ ಬೇರೆ ವಸತಿಗಳಿರುವದಲ್ಲದೆ ಬಸ್ ಮತ್ತು ರೇಲುಗಾಡಿಗಳಲ್ಲಿ ಕೂಡ ಎರಡು ವರ್ಣಗಳಿಗೆ ಬೇರೆ ಬೇರೆ ವ್ಯವಸ್ಥೆಯಿದ್ದು ಅವನ್ನು ಮುರಿದು "ಸಂಕರ" ಮಾಡುವವರನ್ನು ದಂಡಿಸಲಾಗುತಿದೆ. ಅಂಥ ಒಂದು ಬಸ್ಸಿನಲ್ಲಿ ಬಿಳಿಯರ ಸ್ಥಳದಲ್ಲಿ ಕುಳಿತ ತಪ್ಪಿಗೆ ರಸ್ಟಿನ್ನರು ೩೦ ದಿನಗಳ ತನಕ ರಸ್ತೆಯ ಕೆಲಸದ ಗ್ಯಾಂಗಿನಲ್ಲಿ ದುಡಿಯಬೇಕೆಂದು ನ್ಯಾಯಸ್ಥಾನದಲ್ಲಿ ವಿಧಿಸಲ್ಪಟ್ಟಿತು. ರಸ್ಟಿನ್ನರು ತಾವಾಗಿ ಬಂದು ಪೋಲೀಸರ ವಶವಾಗಿ ಶಿಕ್ಷೆಯನ್ನು ಅನುಭವಿಸುತಿದ್ದಾರೆ.

೧೯೪೬ ರಲ್ಲಿ ಅಮೇರಿಕೆಯ ವರಿಷ್ಠ ನ್ಯಾಯಾಲಯದಲ್ಲಿ ನಡೆದ ಒಂದು ಪ್ರಕರಣದ ಫಲವಾಗಿ ನಿಗ್ರೋ ಪ್ರಜೆಗಳಿಗೆ ಒಂದು ಹೆಚ್ಚಿನ ಹಕ್ಕು ದೊರೆಯಿತು. ಸಂಸ್ಥಾನದಿಂದ ಸಂಸ್ಥಾನಕ್ಕೆ ಹೋಗುವ (ಅಂತಃ-ಸಂಸ್ಥಾನ) ವಾಹನಗಳಲ್ಲಿ ವರ್ಣಭೇದ ಕೂಡದು, ಎಂದು. ಆದರೆ ದಕ್ಷಿಣದ ವರ್ಣದ್ವೇಷಿ ಸಂಸ್ಥಾನಗಳು ಈ ನಿರ್ಣಯವನ್ನು ಮುರಿದು ಸಂಕರ ಪ್ರಯಾಣ ಮಾಡುವವರನ್ನು ದಂಡಿಸುತ್ತಲೇ ಇವೆ. ಇದರ ವಿರುದ್ಧ ವರಿಷ್ಠ ನ್ಯಾಯಾಲಯದಲ್ಲಿ ನಿಗ್ರೋಗಳೂ ಅವರ ಬೆಂಬಲಿಗರೂ ಒಂದು ಪರೀಕ್ಷಾರ್ಥ ಪ್ರಕರಣವನ್ನು ಹೋರಾಡುತಿದ್ದಾರೆ. ಆ ನಡುವೆ ಈ ಬಗೆಯ ಸತ್ಯಾಗ್ರಹ ಚಳವಳಿಯೂ ನಡೆಯುತಿದೆ.

ಇದರಲ್ಲಿ ಒಂದು ಆಶಾದಾಯಕವಾದ ಮಾತೆಂದರೆ, ಕೆಲ ಬಿಳಿಯರೂ ವರ್ಣದ್ವೇಷ, ವರ್ಣಪಕ್ಷಪಾತಗಳನ್ನು ನಿವಾರಿಸಲು ಮುಂದಾಗಿರುವದು. ಶ್ರೀ ರಸ್ಟಿನ್ನರ ಸಂಗಡ ಶಿಕ್ಷೆಗೊಳಗಾದ ಇನ್ನು ಮೂವರಲ್ಲಿ ಒಬ್ಬ ನಿಗ್ರೋ ಹಾಗು ಇಬ್ಬರು ಬಿಳಿಯರಿದ್ದಾರೆ.

ರಸ್ಟಿನ್ ಮತ್ತು ಜತೆಗಾರರ ಸತ್ಯಾಗ್ರಹ ಗಾಂಧೀಜಿ ದಕ್ಷಿಣ ಆಫ್ರಿಕೆಯಲ್ಲಿ ನಡೆಸಿದ ಹೋರಾಟವನ್ನು ನೆನಪಿಗೆ ತರುತ್ತದೆ. ಇಬ್ಬರು ನಿಗ್ರೋಗಳು ಬಿಳಿಯರಿಗಾಗಿ ಗೊತ್ತುಪಡಿಸಿದ ಸ್ಥಳದಲ್ಲಿಯೂ ಬಿಳಿಯರಿಬ್ಬರು ನಿಗ್ರೋಗಳ ಸ್ಥಳದಲ್ಲೂ ಕುಳಿತು ಬಸ್ ಸವಾರಿ ಮಾಡಿದರು. ಪೋಲೀಸರು ಅವರನ್ನು ಸ್ವಸ್ವಸ್ಥಾನಗಳಿಗೆ ಹೋಗುವಂತೆ ಆಜ್ಞಾಪಿಸಿದೊಡನೆ ವರಿಷ್ಠ ನ್ಯಾಯಾಲಯದ ಆಜ್ಞೆಯಂತೆ ಅಂತಃಸಂಸ್ಥಾನ ಸಂಚಾರದಲ್ಲಿ ವರ್ಣಭೇದಕ್ಕೆಡೆಯಿಲ್ಲದ್ದರಿಂದ ತಾವು ಕದಲುವದಿಲ್ಲೆಂದು ಅವರು ಗಾಂಧೀತಂತ್ರದ ಉತ್ತರಕೊಟ್ಟರು. ಪೋಲೀಸರು ಅವರನ್ನು ಬಂಧಿಸಿ ನ್ಯಾಯಸ್ಥಾನದಲ್ಲಿ ಹಾಜರುಪಡಿಸಿದಾಗ ಜಾಮೀನು ಕೊಟ್ಟು ಹೊರಬಂದರು. ಬಿಳಿ ಪುಂಡರ ತಂಡವೊಂದು ಅವರನ್ನು ಹಿಡಿದು ಚಿತ್ರಹಿಂಸೆ ಮಾಡಲು ಯತ್ನಿಸಿತು. ಒಬ್ಬ ಬಿಳಿ ಪಾದ್ರಿಯ ಮನೆಯಲ್ಲಿ ಆಶ್ರಯ ಪಡೆದು ಹೇಗೋ ಪಾರಾಗಿ ಹೋದರು. ಮುಂದೆ ವಿಚಾರಣೆಯ ದಿನ ಹಾಜರಾಗಿ ಶಿಕ್ಷೆಯನ್ನು ಸ್ವೀಕರಿಸಿದರು. ಉತ್ತರ ಕೆರೋಲಿನಾದ ಮುಖ್ಯ ಕೋರ್ಟಿನಲ್ಲಿ ಅವರ ಅಪೀಲು ನಿರಾಕರಿಸಲ್ಪಟ್ಟಿತು.

ವರ್ಣದ್ವೇಷ ಮತ್ತು ಪಕ್ಷಪಾತವನ್ನು ಹೋಗಲಾಡಿಸುವದಕ್ಕಾಗಿ ಇಂಥ ಚಟುವಟಿಕೆಗಳನ್ನು ನ್ಯಾಯಸ್ಥಾನದಲ್ಲಿ ಮತ್ತು ಹೊರಗೆ ನಡೆಸಲು ವರ್ಣ ಸಮಾನತೆಯ ಕಾಂಗ್ರೆಸ್ಸೆಂಬ ಸಂಸ್ಥೆ ದುಡಿಯುತಿದೆ. ಅದರ ವರ್ಣ ಸಂಬಂಧಗಳ ಶಾಖೆಯ ಕಾರ್ಯದರ್ಶಿಗಳೇ ಶ್ರೀ ರಸ್ಟಿನ್ನರು. ಅವರು ಭಾರತಕ್ಕೆ ಬಂದಿದ್ದಾಗ ಜಯಪೂರ ಕಾಂಗ್ರೆಸ್ ಅಧಿವೇಶನಕ್ಕೆ ಆಮಂತ್ರಿಸಲ್ಪಟ್ಟಿದ್ದರಲ್ಲದೆ, ಭಾರತದ ಗವರ್ನರ ಜನರಲ್ ಶ್ರೀ. ರಾಜಗೋಪಾಲಾಚಾರ್ಯರು ಅವರಿಗೆ ಸತ್ಕಾರ ಮಾಡಿದರು. ಮುಖ್ಯಮಂತ್ರಿ ನೆಹರೂ ಅವರೊಡನೆ ಜಾಗತಿಕ ಸಮಸ್ಯೆಗಳ ಬಗ್ಗೆ ಹಲವು ಸಂಭಾಷಣೆಗಳನ್ನು ನಡೆಸಿದ್ದರಲ್ಲದೆ ಶ್ರೀ ಠಕ್ಕರ ಬಾಪಾರೊಡನೆ ಮೈಸೂರಿನ ಹಲ ಹಳ್ಳಿಗಳಲ್ಲಿ ಸಂಚರಿಸಿದ್ದರು.



ಪಂ. ನೆಹರೂರೊಡನೆ ಶ್ರೀ ರಸ್ಟಿನ್ (

# ಅಫಗಾಣಿಸ್ತಾನದಲ್ಲಿ ಸಂಸ್ಕೃತ

ಎಂಟನೆ ಶತಮಾನದಲ್ಲಿ ಇಸ್ಲಾಮ ಧರ್ಮವ ನ್ನವಲಂಬಿಸುವ ವರೆಗೂ ಅಫಗಾಣಿಸ್ತಾನವು ಭಾರತದ ಸಾಂಸ್ಕೃತಿಕ ಸಾಮ್ರಾಜ್ಯಕ್ಕೇ ಸೇರಿದ ಭಾಗವಾಗಿತ್ತು. ಅನಂತರ ಬ್ರಿಟಿಶರ ಉಚ್ಛ್ರಾಯ ಕಾಲದ ವರೆಗೂ ಅದು ಭಾರತದ ಮುಸ್ಲಿಂ ಸಮ್ರಾಟರ ವಶದಲ್ಲಿ ಈ ದೇಶದ ಅಂಶವಾಗಿಯೆ ಇದ್ದರೂ ನಮ್ಮ ಸಾಂಸ್ಕೃತಿಕ ಪ್ರಭಾವದಿಂದ ಸಿಡಿದು ಹೋಗಿ ಅರಬ್ಬಿ ಸಂಸ್ಕೃತಿಯ ಕಕ್ಷೆಯಲ್ಲಿ ಸೇರಿತು. ಆದರೆ ಇದು ಶಾಸ್ತ್ರಗಳ ಯುಗ. ಜಗತ್ತಿನ ಪ್ರದೇಶಗಳನ್ನು ವಿಶಿಷ್ಟ ಸಾಂಸ್ಕೃತಿಕ ಅಥವಾ ಧಾರ್ಮಿಕ ಪಂಜರದಲ್ಲಿ ಬಂಧಿಸಿಡುವದು ಅಸಾಧ್ಯವೇ ಆಗಿದೆ. ಭಾಷಾಶಾಸ್ತ್ರದ ಬೆಳವಣಿಗೆಯಾಗಿ ಯಾವ ಭಾಷೆಗೆ ಯಾವದು ಮೂಲ, ಅದರ ಸ್ವಭಾವ ಧರ್ಮಗಳೇನು ಇತ್ಯಾದಿ ವಿಷಯಗಳು ಸ್ಪಷ್ಟವಾಗುತಿರುವದರಿಂದ ಅಫಗಾಣಿಗಳು ಧರ್ಮದಲ್ಲಿ ಇಸ್ಲಾಮಿಗಳಾಗಿದ್ದರೂ ತಮ್ಮ ಪುಶ್ತೋ ಭಾಷೆಯ ತಾಯಿಯಾದ ಸಂಸ್ಕೃತದ ಅಭ್ಯಾಸಕ್ಕೆ ಪ್ರಾಧಾನ್ಯ ಕೊಟ್ಟು ಕಾಬೂಲ ವಿಶ್ವವಿದ್ಯಾಲಯದಲ್ಲಿ ಸಂಸ್ಕೃತವನ್ನು ಒತ್ತಾಯದ ವಿಷಯವಾಗಿ ಮಾಡಿದ್ದು ವಿಚಿತ್ರವಲ್ಲ.

ಕಾಬೂಲ ವಿಶ್ವವಿದ್ಯಾಲಯದಲ್ಲಿ ನಾಲ್ಕು ವಿದ್ಯಾಂಗಗಳಿವೆ. ಅವುಗಳಲ್ಲೊಂದಾದ ಸಾಹಿತ್ಯಾಂಗದಲ್ಲಿ ಸಂಸ್ಕೃತ ಒತ್ತಾಯದ ವಿಷಯವಾಗಿದೆ. ಅದರ ಸಂಗಡ ದೇಶಭಾಷೆಯಾದ ಪುಶ್ತೋ, ನೆರೆಭಾಷೆಯಾದ ಪರ್ಶಿಯನ್, ದರ್ಶನ ಶಾಸ್ತ್ರ, ಭಾಷಾಶಾಸ್ತ್ರ, ಮನಶ್ಶಾಸ್ತ್ರ, ಸಮಾಜಶಾಸ್ತ್ರ ಮೊದಲಾದವು ಕಲಿಸಲ್ಪಡುತ್ತವೆ. ಯುರೋಪಿನ ಭಾಷೆಗಳಿಗೆ ಗ್ರೀಕ್ ಮತ್ತು ಲ್ಯಾಟಿನ್ ಹೇಗೆ ಮಾತೃಸ್ಥಾನದಲ್ಲಿವೆಯೋ ಹಾಗೆಯೇ ಪರ್ಶಿಯನ್ ಮತ್ತು ಪುಶ್ತೋ ಭಾಷೆಗಳಿಗೆ ಸಂಸ್ಕೃತವು ಮೂಲವಾಗಿದೆಯೆಂದು ಸರಕಾರ ಮನಗಂಡಿದೆ.

### ನಾಲ್ಕು ವರ್ಷಗಳ ಶಿಕ್ಷಣಕ್ರಮ

ಕಾಬೂಲ ವಿಶ್ವವಿದ್ಯಾಲಯದಲ್ಲಿ ಸಂಸ್ಕೃತಾಭ್ಯಾಸ ನಾಲ್ಕು ವರ್ಷಗಳ ಶಿಕ್ಷಣಕ್ರಮದಲ್ಲಿ ನಡೆಯುತ್ತದೆ. ಮೊದಲನೆ ವರ್ಷದಲ್ಲಿ ನಾಗರಿ ಲಿಪಿ, ಓದುವಿಕೆ, ಕೈಬರಹ, ಸರಳ ವ್ಯಾಕರಣ, ಸರಳ ಸಂಸ್ಕೃತ ಸಂಭಾಷಣೆ ಮತ್ತು "ಋಜುಪಥ" ವೆಂಬ ಈಶ್ವರಚಂದ್ರ ವಿದ್ಯಾಸಾಗರರ ಪುಸ್ತಕವನ್ನು ಕಲಿಸಲಾಗುತ್ತದೆ. ಸದ್ಯಕ್ಕೆ ಈ ವರ್ಗದಲ್ಲಿ ೨೫ ವಿದ್ಯಾರ್ಥಿಗಳಿದ್ದಾರೆ.

ಎರಡನೆ ವರ್ಗದಲ್ಲಿ ಇವೇ ವಿಷಯಗಳನ್ನು ಮುಂದುವರಿಸುವದಲ್ಲದೆ ಭಗವದ್ಗೀತೆಯ ನಾಲ್ಕು ಅಧ್ಯಾಯಗಳನ್ನು ಪಾಠ ಹೇಳಲಾಗುವದು. ೨೫ ಶ್ಲೋಕಗಳನ್ನು ಕಂಠಪಾಠ ಮಾಡಿಸಲಾಗುವದು. ಅಫಗಾಣ ವಿದ್ಯಾರ್ಥಿಗಳು ಗೀತೆ ಮತ್ತು ಕುರಾಣಗಳ ತುಲನಾತ್ಮಕ ಅಭ್ಯಾಸದಲ್ಲಿ ತುಂಬ ಆಸಕ್ತಿ ವಹಿಸುವರಲ್ಲದೆ ಕುರಾಣ-ಗೀತೆಗಳ ಸಮಾನ ವಚನಗಳನ್ನು ತಾವೇ ಆರಿಸಿ ಉದಾಹರಿಸುತ್ತಾರೆ.

ಮೂರನೆ ವರ್ಷದಲ್ಲಿ ಗೀತೆಯ ಮತ್ತಾರು ಅಧ್ಯಾಯಗಳನ್ನೂ ಸಂಸ್ಕೃತ ಸಾಹಿತ್ಯದ ಇತಿಹಾಸ ಮತ್ತು ಸಂಸ್ಕೃತ ನಾಟಕ ವಿದ್ಯೆಯನ್ನೂ ಕಲಿಸುವರು.

ನಾಲ್ಕನೆ ವರ್ಷದಲ್ಲಿ ಗೀತೆಯ ಉಳಿದ ಅಂಶಗಳಲ್ಲದೆ ಶಾಕುಂತಲದ ಗದ್ಯಭಾಗವನ್ನೂ ೨೫ ಶ್ಲೋಕಗಳನ್ನೂ ಅಭ್ಯಸಿಸುವರು. ಸಂಸ್ಕೃತದ ಪ್ರಮುಖ ಗದ್ಯಪದ್ಯ ಮಹಾಗ್ರಂಥಗಳ ಪರಿಚಯವನ್ನೂ ವೇದಾಂತ ಶಾಸ್ತ್ರದ ಸ್ಥೂಲ ಪರಿಜ್ಞಾನವನ್ನೂ ಒದಗಿಸಲಾಗುವದು. ಸದ್ಯಕ್ಕೆ ೨, ೩ ಮತ್ತು ೪ ನೆ ಶ್ರೇಣಿಗಳಲ್ಲಿ ೧೧, ೯ ಮತ್ತು ೫ ವಿದ್ಯಾರ್ಥಿಗಳಿರುವರು.

ಸಂಸ್ಕೃತ ಪುಸ್ತಕಗಳ ಕೊರತೆಯಿದೆ. ಕಾಬೂಲದಲ್ಲಿ ೩೦೦ ಪುಸ್ತಕಗಳ ಒಂದು ಚಿಕ್ಕ ಸಂಸ್ಕೃತ ಗ್ರಂಥಾಲಯವಿದೆ. ಸಂಸ್ಕೃತ ಗ್ರಂಥಗಳೂ ಸಂಸ್ಕೃತ ಸಾಹಿತ್ಯದ ಬಗ್ಗೆ ಪರ್ಶಿಯನ್, ಇಂಗ್ಲಿಷ್, ಫ್ರೆಂಚ ಮತ್ತು ಜರ್ಮನ್ ಗ್ರಂಥಗಳೂ ದೊರೆತರೆ ವಿದ್ಯಾರ್ಥಿಗಳಿಗೆ ಉಪಕಾರವಾಗುವದು. ನಮ್ಮ ಸಂಸ್ಕೃತಿಯನ್ನು ಅರಿತುಕೊಳ್ಳಬಯಸುವ ನೆರೆಹೊರೆಯ ಮಿತ್ರರಾಷ್ಟ್ರವೊಂದಕ್ಕೆ ಅನುಕೂಲಮಾಡಿಕೊಡುವ ದೃಷ್ಟಿಯಿಂದ ಅಂಥ ಪುಸ್ತಕಗಳನ್ನು ಕಾಬೂಲ ವಿಶ್ವವಿದ್ಯಾಲಯಕ್ಕೆ ದಾನಮಾಡುವಲ್ಲಿ ಭಾರತೀಯರು ಮುಂದಾಗುವರೆಂದು ಹಾರೈಸಲಾಗಿದೆ.

# ನಗೆಯ ನೊರೆ

ಡಾಕ್ಟರ್- ...ಗಾದರೆ ನಿಮ್ಮ ಗಂಡ ನಿದ್ದೆಯಲ್ಲಿ ಮಾತಾಡುವದರಿಂದ ನಿಮಗೆ ತುಂಬ ಚಿಂತೆಯಾಗಿದೆ, ಅಲ್ಲವೆ?

ಅವಳು- ಹೌದು ಡಾಕ್ಟರ್, ಅವರು ಮಾತಾಡುವದು ಅರ್ಥವೇ ಆಗುವದಿಲ್ಲ!

ಕಾರಖಾನೆಯ ಬೇರೆ ಬೇರೆ ಭಾಗಗಳನ್ನು ಆಗಂತಕನಿಗೆ ತೋರಿಸುತ್ತ ನೌಕರನು ಕೊನೆಗೆ ಒಂದು ಯಂತ್ರದ ಕಡೆಗೆ ಬೊಟ್ಟುಮಾಡಿ, "ಆ ಯಂತ್ರ ನೋಡಿದಿರಾ ರಾಯರೆ? ಅದು ಮೂವತ್ತು ಗಂಡಾಳುಗಳಷ್ಟು ಕೆಲಸ ಮಾಡುತ್ತದೆ," ಎಂದ.

ಬಂದವನು ನಿಟ್ಟುಸಿರುಬಿಟ್ಟು, "ಆಹಾ ನನ್ನ ಹೆಂಡತಿ ಮದುವೆಯಾಗಬೇಕಾಗಿತ್ತು ಇದನ್ನು!" ಎಂದ.

ಮೋಟಾರಿನವನು ದಾರಿತಪ್ಪಿ ಎಲ್ಲೆಲ್ಲೊ ಸುತ್ತಿದ್ದ. ಕೊನೆಗೆ ನಿರ್ಜನವಾದ ಇಕ್ಕಟ್ಟಿನ ರಸ್ತೆಯಲ್ಲಿ ಒಬ್ಬ ಮುದುಕ ಅವನಿಗೆ ಎದುರಾದ "ಧಾರವಾಡದ ದಾರಿ ಗೊತ್ತೆ?" ಎಂದು ಮೋಟಾರು ನಿಲ್ಲಿಸಿ ಮುದುಕನನ್ನು ಕೇಳಿದ.

"ದೇವರಾಣೆ, ನನಗೆ ಗೊತ್ತಿಲ್ಲ."

ಮೋಟಾರು ಸಾವಧಾನವಾಗಿ ಮುಂದೆ ಹೋಯಿತು. ಅರ್ಧ ಮೈಲಿನಷ್ಟು ಮುಂದೆ ಹೋದ ಬಳಿಕ ಅವನಿಗೆ ಹಿಂದಿನಿಂದ ಬರುವ ದನಿಗಳು ಕೇಳಿಸಿದವು. ತಿರುಗಿ ನೋಡಿದ ಮುದುಕನೂ ಇನ್ನೊಬ್ಬನೂ ಕೈಮಾಡಿ ಕರೆಯುತಿದ್ದರು. ಮೋಟಾರನ್ನು ಕಷ್ಟದಿಂದ ಹಿನ್ನಡೆಸುತ್ತ ಅವನು ಆ ಮುದುಕರಿದ್ದಲ್ಲಿ ಬಂದ.

"ಏನು?" ಕೇಳಿದನವನು.

"ಇವ ನನ್ನ ಗೆಳೆಯ ಲಕ್ಕಪ್ಪ. ಇವನಿಗೂ ಧಾರವಾಡ ಯಾವ ಕಡೆ ಗೊತ್ತಿಲ್ಲ," ಎಂದು ಉತ್ತರ ಬಂತು.

ಕೆಂಟ (ಇಂಗ್ಲಂಡ್)ನಲ್ಲಿ ಒಬ್ಬ ಕಳ್ಳನಿದ್ದಾನೆ. ಮನೆಗಳಿಗೆ ಕನ್ನ ಹಾಕಿ ತನಗೆ ಬೇಕಾದ್ದನ್ನು ಕದ್ದ ಮೇಲೆ ಯಜಮಾನನ ಚಣ್ಣಗಳನ್ನೂ ಹಿಡಿದುಕೊಂಡು ಹೋಗಲು ಅವನು ಮರೆಯುವದಿಲ್ಲ.- ಬೇರೆ ಏತಕ್ಕೂ ಅಲ್ಲ. ಅವರು ಬೆನ್ನಟ್ಟದಂತೆ ಮಾಡುವದಕ್ಕಾಗಿ

# ಶಿಕ್ಷೆ--ದೀರ್ಘ ಮತ್ತು ಹ್ರಸ್ವ

ಇಟಲಿಯಲ್ಲಿ ಕೊಲೆಗಾಗಿ ೫೬ ವರ್ಷಗಳ ಶಿಕ್ಷೆಯನ್ನನುಭವಿಸಿದ ನಂತರ ಕಳೆದ ವರ್ಷ ಬಿಡುಗಡೆ ಮಾಡಲ್ಪಟ್ಟ ೭೦ ವರ್ಷದ ಮುದುಕನೊಬ್ಬನು ತನ್ನ ವಿರುದ್ಧ ಸಾಕ್ಷಿ ಹೇಳಿದವನ ಮಗನಿಗೆ ಗುಂಡು ಹಾಕಲು ಪ್ರಯತ್ನಿಸಿದ. ಅವನನ್ನೀಗ ತಿರುಗಿ ಸೆರೆಮನೆಗೊಯ್ದಿದ್ದಾರೆ.

೫೬ ವರ್ಷಗಳ ಸೆರೆಮನೆ ವಾಸ ಬಹಳ ದೀರ್ಘವಾಗಿದ್ದರೂ ಅದು ದಾಖಲೆ ಮುರಿದ ಶಿಕ್ಷೆಯೇನೂ ಅಲ್ಲ. ೧೯೩೬ ರಲ್ಲಿ ಸ್ಪೇನಿನ ಬಾರ್ಸಿಲೋನಾದಲ್ಲೊಬ್ಬನಿಗೆ ೩೩ ಬೇರೆ ಬೇರೆ ಅಪರಾಧಗಳಿಗಾಗಿ ಪ್ರತಿಯೊಂದು ಅಪರಾಧಕ್ಕೆ ೧೪ ವರ್ಷ ೮ ತಿಂಗಳು ೧ ದಿನದಂತೆ ಒಟ್ಟು ೪೮೩ ವರ್ಷ ಶಿಕ್ಷೆಯಾಗಿತ್ತು.

ಇದು ದೀರ್ಘ ಶಿಕ್ಷೆಯ ಮಾತಾಯಿತು. ನ್ನು ಅತಿ ಹ್ರಸ್ವ ಶಿಕ್ಷೆಯ ದಾಖಲೆ ಅಮೇರಿಕೆಯ ಚಿಕಾಗೋದಲ್ಲಿ ಸಿಗುತ್ತದೆ. ಅಲ್ಲಿ ೧೯೩೩ ರಲ್ಲಿ ತನ್ನ ಹೆಂಡತಿಗೆ ಬಂದ ಪತ್ರವನ್ನೊಡೆದು ಓದಿದ್ದಕ್ಕಾಗಿ ಒಬ್ಬನಿಗೆ ೨೫ ಸೆಕಂದ ಶಿಕ್ಷೆ ವಿಧಿಸಲಾಗಿತ್ತು. ಅವನಿಗೆ ಹೆಂಡತಿಯ ಮೇಲೆ ಸಂಶಯ- ಯಾರೋ ಇನ್ನೊಬ್ಬನೊಡನೆ ಸಂಬಂಧ ಇಟ್ಟುಕೊಂಡಿದ್ದಾಳೆಂದು. ಆದರೆ "ಕಾಯದೆಗೆ ಮನ್ನಣೆ ದೊರೆತೇ ತೀರಬೇಕು. ಅನ್ಯರ ಪತ್ರವನ್ನು ಒಡೆದುದರ ಫಲವನ್ನು ನೀನು ಅನುಭವಿಸಲೇಬೇಕು. ಅದ್ದರಿಂದ ಇಪ್ಪತ್ತೈದು ಕ್ಷಣಗಳ ಶಿಕ್ಷೆಯನ್ನು ನಿನಗೆ ವಿಧಿಸಿದೆ," ಎಂದು ಹೇಳಿ ಗಂಭೀರ ಮುದ್ರೆಯಿಂದ ನ್ಯಾಯಾಧೀಶನು ತನ್ನ ಕೈಗಡಿಯಾರದತ್ತ ನೋಡುತ್ತ ೨೫ ಸೆಕೆಂದು ಕಳೆದ ಮೇಲೆ ಅವನನ್ನು ಬಿಡುಗಡೆ ಮಾಡಿದನು.

ತಾನು ನಿಯಂತ್ರಣದ ಮೇರೆಗೆ ಅಟ್ಲಾಂಟಿಕ್ ಒಪ್ಪಂದಕ್ಕೆ ಸೇರುವೆನೆಂದು ಡೆನ್ಮಾರ್ಕ ಅಮೇರಿಕದ ವಿದೇಶ ಶಾಖೆಗೆ ತಿಳಿಸಿದೆ.

# ಆತ್ಮಸಾಕ್ಷಿಗೆ ಅರಿಕೆ

ಖಾನಬಂಧುಗಳು ಮತ್ತು ಖುದಾಯಿ ಖಿದಮತ್‌ಗಾರರ ಸಂಬಂಧದಲ್ಲಿ ಪಂಡಿತ ಜವಾಹರಲಾಲರು ಕೊಟ್ಟ ಹೇಳಿಕೆಯನ್ನು ಸಂಕ್ಷೇಪತಃ ಈ ನೊದಲು ಕೊಟ್ಟವ್ವಾಗಿದೆ. ದೀರ್ಘಾವಧಿಯ ಅವರ ಬಂಧನವು ಜಗತ್ತಿನಲ್ಲಿಯ ಸುಸಂಸ್ಕೃತ ಆತ್ಮಸಾಕ್ಷಿಗೆ ಅಹ್ವಾನದಂತಿದೆ. ಅತ್ಯುಚ್ಚ ಧ್ಯೇಯಗಳಿಗಾಗಿ ಅತ್ಯಂತಿಕ ನಿಷ್ಠೆಯಿಂದ ಸ್ವಾರ್ಥತ್ಯಾಗಪೂರ್ವಕ ಆತ್ಮಾಹುತಿ ಮಾಡಿದ ಉದಾಹರಣೆ ಎಲ್ಲಿಯಾದರೂ ಇದ್ದರೆ ಅದು ಖಾನಬಂಧುಗಳದೇ ಆಗಿದೆ. ವಿಶೇಷತಃ ಬಾದಶಹಾಖಾನರದಿದೆ. ಕ್ರೂರವೀರ ಪಠಾಣರಲ್ಲಿ ಶೂರರ ಅಹಿಂಸಾ ತತ್ವವನ್ನು ಬೋಧಿಸಿ ದೊಡ್ಡದೊಂದು ಪವಾಡವನ್ನು ಮಾಡಿ ತೋರಿಸಿದ ಅವರ ಕಾರ್ಯವನ್ನು ಜಗತ್ತು ಸುಲಭವಾಗಿ ಮರೆಯಲಾರದು. ಅಧಿಕಾರದಲ್ಲಿದ್ದ ಸರಕಾರದ ಸಂಬಂಧದಲ್ಲಿ ಯಾವದೇ ಬಗೆಯ ಭಿನ್ನಾಭಿಪ್ರಾಯವಿರಬಹುದಾದರೂ ಅದರಲ್ಲಿದ್ದ ಅವರ ನಿಷ್ಠೆಯನ್ನು ಯಾರೂ ಆಕ್ಷೇಪಿಸಲಾರರು. ಪಾಕಿಸ್ತಾನಕ್ಕೆ ಅವರು ಒಪ್ಪಿಗೆ ಕೊಟ್ಟಿದ್ದಾರೆ. ವಿಭಜನೆಯ ನಂತರ ೧೯೪೭ ರ ಡಿಸೆಂಬರದಲ್ಲಿ ಮತ್ತು ೧೯೪೮ ರ ಜನೆವರಿಯಲ್ಲಿ ಕೊನೆಯ ಸಲ ನಾನು ಗಾಂಧೀಜಿ ಕೂಡ ಇದ್ದಾಗ ಬಾದಶಹಾಖಾನರು ಗಾಂಧೀಜಿಗೆ ಪತ್ರ ಬರೆದು ತಮ್ಮ ಬಗೆಗೆ ಯಾವದೇ ಬಗೆಯ ವಿವಂಚನೆಗೊಳಗಾಗಬಾರದು, ಯಾವದೇ ಬಗೆಯ ಸಂಶಯಕ್ಕೆ ಅವಕಾಶ ಕೊಡಬಾರದೆಂದೂ ತಾವು ಅವರಿಗೆ ಭೆಟ್ಟಿಯಾಗುವದನ್ನು ಇಲ್ಲವೆ ಪತ್ರ ಬರೆಯುವದನ್ನು ಬಿಟ್ಟುಗೊಟ್ಟಿರುವದಾಗಿಯೂ ತಿಳಿಸಿದ್ದರು. ಯಾವದೇ ಬಗೆಯ ಕಪಟ ಇಲ್ಲವೆ ಮೋಸದ ಸಂಶಯ ಅವರಲ್ಲಿ ತಾಳುವದು ಘೋರ ಅಪರಾಧವೆನಿಸುವದು. ಅವಾವೂ ಅವರಿಗೆ ಶಕ್ಯವಿಲ್ಲ. ಅವರು ತಮ್ಮ ದೇಶ ಮತ್ತು ದೇಶಬಾಂಧವರನ್ನು ಅತ್ಯಂತಿಕವಾಗಿ ಪ್ರೀತಿಸುತ್ತಾರೆ. ಸ್ವಭಾವತಃ ಬಾದಶಹಾಖಾನರು ಸರಳರು ಮತ್ತು ಕೆಲ ಸಲ ವ್ಯಾಕುಲತೆ ಹುಟ್ಟುವಷ್ಟು ನಿಷ್ಕಪಟಿಗಳು. ಗಾಂಧೀಜಿಯವರು ಅವರನ್ನು ಎಲ್ಲಬಗೆಯಿಂದ ಪರೀಕ್ಷಿಸಿ ಒರೆಗೆ ಹಚ್ಚಿದ ನಂತರ ೧೯೩೮ ರಲ್ಲಿ ಅವರ ಸಂಗಡ ಸುಪ್ರಖ್ಯಾತವಾದ ಗಡಿನಾಡ ಸಂಚಾರ ಮುಗಿಸಿಕೊಂಡು ಬಂದ ಬಳಿಕ ಅವರ ಬಗ್ಗೆ ಈ ರೀತಿ ಬರೆದರು.

"ಖುದಾಯಿ ಖಿದಮತಗಾರರು ಯಾವದೇ ಸ್ವಭಾವದವರಿರಲಿ ಮತ್ತು ಕೊನೆಗೆ ಅವರ ಸ್ವಭಾವ ಯಾವದೇ ಬಗೆಯಾಗಿ ಮಾರ್ಪಡಲಿ, ಅವರು ಪ್ರೀತಿಯಿಂದ ಬಾದಶಹಾಖಾನ ಎಂದು ಅವರನ್ನು ಕರೆಯುತಿರುವ ಅವರ ಧುರೀಣರ ಬಗ್ಗೆ ಯಾವದೇ ಬಗೆಯ ಸಂಶಯವಿಲ್ಲ. ನಿಃಸಂದೇಹವಾಗಿ ಅವರು ದೈವಭಕ್ತರಾಗಿರುವರು. ಪರಮಾತ್ಮನ ಅಸ್ತಿತ್ವದಲ್ಲಿ ಅವರಿಗೆ ವಿಶ್ವಾಸ. ಪರಮಾತ್ಮನ ಅನುಗ್ರಹವಿದ್ದರೆ ಮಾತ್ರ ತಮ್ಮ ಚಳವಳಿ ಯಶಃಪ್ರದವಾಗಬಲ್ಲುದೆಂದು ಅವರ ನಂಬಿಕೆ. ಈ ಕಾರ್ಯದಲ್ಲಿ ತಮ್ಮ ಸರ್ವಸ್ವವನ್ನು ಅವರು ಸೂರೆಮಾಡಿರುವದರಿಂದ ಎಂಥ ಗಂಡಾಂತರ ಬಂದರೂ ಅವರು ಅವಿಚಲವುಳಿಯುವರು. ಅಹಿಂಸೆಯಿಂದಲ್ಲದೆ ಪಠಾಣರಿಗೆ ಬೇರೆ ಯಾವುದರಿಂದಲೂ ಮೋಕ್ಷವಿಲ್ಲ ಎಂದು ಅವರ ಮನವರಿಕೆಯಾಗಿದೆ. . . . . . ಪಠಾಣ ಬಾಂಧವನು ಸಮಾಜಘಾತಕನಾದುದನ್ನು ನೋಡುವದು ಅವರಿಗೆ ಸೇರುವದಿಲ್ಲ. ಪಠಾಣರನ್ನು ಶೋಷಿಸಿ ಅವರನ್ನು ಅಜ್ಞಾನದಲ್ಲಿ ಇಡಲಾಗಿದೆಯೆಂದು ಅವರ ಅಭಿಪ್ರಾಯ. ಈಗಿನಕಿಂತ ಹೆಚ್ಚು ಶೂರರು ಪಠಾಣರಾಗಬೇಕೆಂದು ಅವರ ಅಭಿಪ್ರಾಯ; ಆ ಶೌರ್ಯಕ್ಕೆ ತಿಳವಳಿಕೆಯ ಕುಂದಣ ಕೂಡಿಸಬೇಕೆಂದು ಅವರ ಆಸೆ. ಅಹಿಂಸೆಯಿಂದಲೆ ಇದು ಸಾಧ್ಯವೆಂದು ಅವರ ಅಭಿಪ್ರಾಯ....

"ವಂಚನೆಯ ಗಂಧಕೂಡ ಅವರಲ್ಲಿ ಇಲ್ಲ. ದಂಭದ ಲವಲೇಶವೂ ಅವರಲ್ಲಿ ಇಲ್ಲ. . . . ಅಂತೆಯೆ ತಕ್ಷಶಿಲೆಯಲ್ಲಿ ನಾವಿಬ್ಬರೂ ನಿರೋಪ ತೆಗೆದುಕೊಳ್ಳುವಾಗ ನಮ್ಮ ಕಣ್ಣು ನೀರಿನಿಂದ ತುಂಬಿದವು."

ಇದೇ ಸಂಚಾರದಲ್ಲಿ ಬಾದಶಹಾಖಾನರು ಗಾಂಧೀಜಿಯವರಿಗೆ ತಮ್ಮ ಹೃದಯವನ್ನು ಬಿಚ್ಚಿ ಹೇಳಿದರು. ಅವರ ಬಾಯಿಂದ ಹೊರಟ ಶಬ್ದಗಳು ಇಂತಿವೆ. ಆಗಿನ ಹರಿಜನದಲ್ಲಿ ಅವಿಂತು ಉಲ್ಲೇಖಿಸಲ್ಪಟ್ಟವೆ:

"ಮಹಾತ್ಮಾಜಿಯವರೇ, ಇಷ್ಟೊಂದು ನಿಸರ್ಗ ಸಂಪತ್ಸಮೃದ್ಧವಾದ ನಮ್ಮ ದೇಶವು ಈ ಭೂಮಿಯಲ್ಲಿಯ ನಂದನವನವಾಗಿರುವದರ ಬದಲು ನರಕವಾಗಿ ಪರಿಣಮಿಸಿದೆ. ಬೇರೆ ಯಾವುದಕ್ಕಿಂತಲೂ ಈ ಪ್ರಾಂತದಲ್ಲಿ ಪಠಾಣರ ಹಿಂಸಾಚಾರವು ಅನರ್ಥಮೂಲವಾಗಿದೆ ಎಂಬ ನನ್ನ ನಿರ್ಧಾರ ದಿನದಿನಕ್ಕೆ ಹೆಚ್ಚುತ್ತಲಿದೆ. ಅದರಿಂದ ನಮ್ಮ ಐಕ್ಯ ಸಂಘಟನೆ ಹಾಳಾಗಿ ಹೋಗಿವೆ. ಒಳ ಜಗಳಗಳು ಹೆಚ್ಚಿವೆ. ತಮ್ಮ ಬಂಧುವಿನ ಕುತ್ತಿಗೆ ಹೇಗೆ ಕೊಯ್ಯಬೇಕೆಂಬುವಲ್ಲಿಯೆ ಪಠಾಣರ ಶಕ್ತಿಸರ್ವಸ್ವವೆಲ್ಲ ಸೂರೆಯಾಗಹತ್ತಿದೆ. ಈ ಘೋರ ಅಪರಾಧದಿಂದ ನಾವು ಮುಕ್ತರಾದರೆ ನಮ್ಮ ಉತ್ಸಾಹಶಕ್ತಿಯನ್ನೆಲ್ಲ ಎಷ್ಟೊಂದು ಉಪಯುಕ್ತ ಕಾರ್ಯದಲ್ಲಿ ವಿನಿಯೋಗಿಸಬಹುದು ?

"ಎರಡನೇ ಪ್ರಾಂತಗಳಲ್ಲಿ ಏನೇ ಇದ್ದರೂ ಗಡಿನಾಡಿನಲ್ಲಿಯಂತೂ ಅಹಿಂಸೆಯಿಂದ ಬಹಳ ಲಾಭವಾಗಿದೆ. ಅಹಿಂಸೆಯ ಹೊರತು ಪಠಾಣರಿಗೆ ಬೇರೆ ಮೋಕ್ಷ ಮಾರ್ಗವಿಲ್ಲ. ಅಹಿಂಸೆಯ ಲೇಶಮಾತ್ರದಿಂದ ನಮಗಾದ ಲಾಭದ ಅನುಭವದಿಂದ ನಾನು ಈ ಮಾತನ್ನು ಹೇಳುತಿರುವೆನು. ಮಹಾತ್ಮಾಜಿಯವರೆ, ನಾವು ಮೊದಲು ಬಹಳ ಅಂಜುಬುರುಕರು ಮತ್ತು ನಿರುದ್ಯೋಗಿಗಳಾಗಿದ್ದೆವು. ಇಂಗ್ಲಿಶರನ್ನು ನೋಡಿದ ಕೂಡಲೆ ನಾವು ಬೆಚ್ಚಿ ಬೀಳುತಿದ್ದೆವು..ಅಲಸಿಗರಾಗಿಯೆ ನಾವು ವೇಳೆ ಕಳೆಯುತಿದ್ದೆವು. ನಿಮ್ಮ ಚಳವಳಿಯಿಂದ ಎಲ್ಲವೂ ಬದಲಾವಣೆ ಹೊಂದಿದೆ. ನಮ್ಮಲ್ಲಿ ನವಜೀವನ ಬಂದಿದೆ; ನಾವು ಹೆಚ್ಚು ಉದ್ಯೋಗಿಗಳಾಗಿರುವೆವು. ಮೊದಲು ಹತ್ತು ರೂಪಾಯಿ ಬೆಲೆ ಬರುತಿದ್ದ ಭೂಮಿ ಈಗ ಇಮ್ಮಡಿ ಉತ್ಪಾದನೆ ಮಾಡುತಿದೆ. ಅಂಜಿಕೆಯನ್ನು ನಾವು ಬಿಟ್ಟುಗೊಟ್ಟಿರುವೆವು. ಆಂಗ್ಲರು ನಮ್ಮನ್ನೀಗ ಅಂಜಿಸಲಾರರು....ನಮ್ಮ ಅಹಿಂಸೆಗಾಗಿ ಇಂಗ್ಲಿಶರು ಭಯಭೀತರಾಗಿರುವರು. ಅಹಿಂಸಾತ್ಮಕ ಪಠಾಣನು ಹಿಂಸಾತ್ಮಕ ಪಠಾಣನನಿಗಿಂತ ಹೆಚ್ಚು ಘಾತಕನೆಂದು ಅವರ ಅಭಿಪ್ರಾಯ. ನೀವು ವಿವರಿಸಿದಂತೆ ಅಹಿಂಸೆಯನ್ನು ಇಡಿಯಾಗಿ ಆಚರಣೆಯಲ್ಲಿ ತಂದರೆ, ನಾವು ಎಷ್ಟೊಂದು ಗಟ್ಟಿಗರು ಮತ್ತು ಶ್ರೀಮಂತರು ಆಗಬಲ್ಲೆವು ! ನಾವು ತೀರ ವಿನಾಶಕ ಪರಿಸ್ಥಿತಿಯಲ್ಲಿ ಇದ್ದೆವು. ಆದರೆ ನಮ್ಮ ಉದ್ಧಾರಕ್ಕಾಗಿ ಪರಮಾತ್ಮನು ಅಹಿಂಸಾತ್ಮಕ ಚಳವಳಿಯನ್ನು ಕೊಟ್ಟು ದಯೆದೋರಿದನು."

ಇಸ್ಲಾಮ ಸರಕಾರವೆಂದು ಕರೆದುಕೊಳ್ಳುವ ಸರಕಾರದ ಶತ್ರುವು ಇಂಥ ಮನುಷ್ಯನೆಂದೂ ಆಗಲಾರನು. ಶೂರ ಮತ್ತು ಹುತಾತ್ಮರ ವರ್ಗದಲ್ಲಿ ಸೇರತಕ್ಕವರು ಖಾನ ಬಂಧುಗಳು. ಯಾರ ಬಗ್ಗೆಯೂ ಅವರಲ್ಲಿ ದ್ವೇಷಭಾವನೆ ಇಲ್ಲ. ಯಾವದೇ ಬಗೆಯ ಸ್ವಾರ್ಥವನ್ನು ಸಾಧಿಸುವ ಆಸೆ ಅವರಿಗಿಲ್ಲ. ತಮ್ಮ ಧ್ಯೇಯ ಸಾಧನೆಯಲ್ಲಿ ಆತ್ಮಾರ್ಪಣೆ ಮಾಡಲು ಅವರು ಸಿದ್ಧರಿರುವರು. ಅವರ ಮಟ್ಟಿಗೆ ಅದು ಉಚಿತವೆ. ಆದರೆ ಅಂಥ ದೈವಭಕ್ತರ ಸದುಪಯೋಗ ಮಾಡಿಕೊಳ್ಳುವದು ಅವಶ್ಯವಾಗಿದೆ. ಅವರನ್ನು ಸಜೀವ ಹುಗಿಯುವದಕ್ಕಿಂತ, ಅವರ ಹೆಚ್ಚಿನ ಉಪಯೋಗ ತೆಗೆದುಕೊಳ್ಳಬೇಕಾದುದು ಕರ್ತವ್ಯವಾಗಿದೆ.

ಖುದಾಯಿ ಖಿದಮತಗಾರರಿಗೆ ಕೆಲ ಮಾತು ಹೇಳಬೇಕಾಗಿದೆ. ಅವರ ಸತ್ವಪರೀಕ್ಷೆಯ ಕಾಲವಿದು. ಮೇಲೆ ಉದ್ಧರಿಸಿದ ಲೇಖದಲ್ಲಿಯ ಗಾಂಧೀಜಿಯ ಭವಿಷ್ಯ ವಾಣಿಯನ್ನು ಅವರು ಮನಸ್ಸಿನಲ್ಲಿ ಇಟ್ಟುಕೊಳ್ಳಲಿ.

"ಖುದಾಯಿ ಖಿದಮತಗಾರರು ರೊಚ್ಚಿನ ಭರದಲ್ಲಿ ತಾವು ಇಟ್ಟುಕೊಂಡ ಅಹಿಂಸಾ ವ್ರತದಿಂದ ಚ್ಯುತರಾದರೆ ನಿಜವಾಗಿಯೂ ಅವರಲ್ಲಿ ಅಹಿಂಸಾತತ್ವ ಆಳವಾಗಿ ಬೇರೂರಿಲ್ಲ ಎಂದು ಹೇಳಬೇಕಾಗುವದು. ಬೇಗ ಇದು ಒರೆಗಲ್ಲಿಗೆ ಹತ್ತುವದು. ಅವರು ಆಸ್ಥೆಯಿಂದ ಮತ್ತು ನಿಷ್ಠೆಯಿಂದ ರಚನಾತ್ಮಕ ಕಾರ್ಯದಲ್ಲಿ ನಿರತರಾದರೆ ಗಂಡಾಂತರವೇನೂ ಇಲ್ಲ. ಪರೀಕ್ಷಾ ಸಮಯದಲ್ಲಿ ಅವರು ಶೂರ ವೀರರಲ್ಲಿ ಪರಿಗಣಿಸಲ್ಪಡುವರು."

ಅಹಿಂಸೆಯು ಯಾರೊಬ್ಬರ ಅನುಮತಿಯನ್ನು ಅವಲಂಬಿಸದು. ಅದಕ್ಕೆ ಅನ್ಯ ಪ್ರಮಾಣವೂ ಇರುವುದಿಲ್ಲ. ಪ್ರಮಾಣ ಮುದ್ರೆಯೂ ಇರುವದಿಲ್ಲ. ನಿರ್ದೋಷ ಸಹನೆ ಮಾತ್ರದಿಂದ ಅದು ವಿಜಯಿಯಾಗಬಲ್ಲುದು, ಪರಾಜಯವೆಂದೇ ಅಗ ತೋರಬಹುದಾದರೂ ಅದಕ್ಕೆಂದಿಗೂ ಅಪಜಯವಿಲ್ಲ.

ದಿಲ್ಲಿ
೨೦-೩-೪೮ — ಪ್ಯಾರೇಲಾಲ

# ಅಂದಿನ ಮತ್ತು ಇಂದಿನ ರಾಜಕಾರಣ

"ಕಾಂಗ್ರೆಸ್ ಮತ್ತು ರಚನಾತ್ಮಕ ಕಾರ್ಯಕರ್ತರು" ಎಂಬ ಒಂದು ಲೇಖಮಾಲೆಯಲ್ಲಿ ಶ್ರೀ ಶಂಕರರಾವ ದೇವರು, 'ಅಖಿಲ ಭಾರತ ಸರ್ವಸೇವಾ ಸಂಘ' ವೆಂಬ ಸಣ್ಣ ಚಿಕ್ಕ ಲೇಖದ ಶೀರ್ಷಿಕಾಪರಿಚ್ಛೇದವನ್ನು ಸೂಕ್ತವಾಗಿಟ್ಟುಕೊಂಡು, ರಚನಾತ್ಮಕ ಕಾರ್ಯಕರ್ತರು ರಾಜಕಾರಣದಲ್ಲಿ ಭಾಗವಹಿಸಬೇಕೆಂದು ಪ್ರತಿಪಾದಿಸಲು ಯತ್ನಿಸಿದ್ದಾರೆ. ಅವರ ಲೇಖನದ ಉದ್ದಕ್ಕೂ ವಿವಿಧ ರಾಜ್ಯಪದ್ಧತಿಗಳಲ್ಲಿ ರಾಜಕಾರಣಕ್ಕಿರುವ ಸ್ಥಾನದ ಬಗ್ಗೆ ಚಿರಂತನವಾದ ತಪ್ಪುತಿಳವಳಿಕೆಯಿರುವದು ಕಾಣಬರುತ್ತದೆ. ಪರಾಧೀನರಾಷ್ಟ್ರದಲ್ಲಿನ ರಾಜಕಾರಣವೇ ಬೇರೆ, ಸಾಮ್ರಾಜ್ಯವಾದದ ರಾಜಕಾರಣವೇ ಬೇರೆ ಸರ್ವಾಧಿಕಾರಿ ರಾಜ್ಯಗಳಲ್ಲಿ ರಾಜಕಾರಣದರೂಪ ಒಂದು ಬಗೆಯಾಗಿದ್ದರೆ, ಪ್ರಜಾತಂತ್ರದಲ್ಲಿ ಅದರ ಅಚ್ಚು ಇನ್ನೊಂದು ಬಗೆಯಾಗಿರುತ್ತದೆ. ಸ್ವರಾಜ್ಯದ ರಾಜಕಾರಣ ರಾಮರಾಜ್ಯದ ರಾಜಕಾರಣದ ತದ್ರೂಪತಿಯಾಗಿರಬೇಕೆಂದಿಲ್ಲ. ಅವರು ರಚನಾತ್ಮಕ ಕಾರ್ಯಕರ್ತರಿಗೆ ಕೊಟ್ಟ ಕರೆ ಮಕ್ಕಳ ಪದ್ಯಪುಸ್ತಕದ "ಬಾ ನೊಣವೆ ಬಾ ನೊಣವೆ ಬಾ ನನ್ನ ಮನೆಗೆ" ಎಂಬ ಹಾಡನ್ನು ನೆನಪಿಗೆ ತರುತ್ತದೆ.

ಹಳೆಯ ಸಾಮ್ರಾಜ್ಯವಾದದ ಸಂದರ್ಭದಲ್ಲಿ ನಮ್ಮ ರಾಜಕಾರಣದ ನಿರ್ದಿಷ್ಟ ಗುರಿ ವಿದೇಶೀ ಆಳಿಕೆಯನ್ನು ಕಿತ್ತುಹಾಕುವದೇ ಆಗಿತ್ತು. ಆ ಕಷ್ಟಕಾಲದಲ್ಲಿ ನಾವು ರೂಪಿಸಿಕೊಂಡಿದ್ದ ಕೆಲ ವಿಶಿಷ್ಟ ತಂತ್ರಗಳು ಇಂದು ಸ್ವರಾಜ್ಯದ ಕಾಲದಲ್ಲಿ ಸ್ವಾಭಾವಿಕವಾಗಿ ನಿಷ್ಪ್ರಯೋಜಕವಾಗುವವು. ಹಳೆಯ ಪದ್ಧತಿಯಲ್ಲಿ ತರಬೇತಿ ಹೊಂದಿದವರಿಗೆ ಅದು ಮೈಯುಂಡು ಹೋಗಿದ್ದು ತಮ್ಮ ಸ್ವಭಾವದಿಂದ ಅದನ್ನು ದೂರೀಕರಿಸುವದು ಅಸಾಧ್ಯಪ್ರಾಯವಾಗಿಬಿಟ್ಟಿದೆ. ಅಂಥ ಬಿಗಿ ಸ್ವಭಾವದ ಹಳೇ ಯೋಧರು ಬದಿಗೆ ಸರಿದು ಹೊಸ ಬಗೆಯ ಜನರಿಗೆ ದಾರಿಮಾಡಿ ಕೊಡಬೇಕಾಗುತ್ತದೆ. ಆದರೆ ಹಳೆಯ ಕಾಲದವರೇ ಎಷ್ಟುಕಾಲ ಓಟದಲ್ಲಿ ಸ್ಪರ್ಧಿಸುತ್ತಿರುತ್ತಾರೊ ಅಷ್ಟುಕಾಲ ಅವರಿಗೆ ಹಿಂದಿನ ರಭಸದ ಅನುಕೂಲವಿದ್ದೇ ಇರುವದರಿಂದ ಅವರು ಹೊಸಬರನ್ನು ಕರೆಯುವದರಲ್ಲಿ ಅರ್ಥವಿಲ್ಲ. ಶ್ರೀ ಶಂಕರರಾಯರು ಹೇಳುತ್ತಾರೆ– "ಸದ್ಯದ ಕಾಂಗ್ರೆಸ್ ಮುಂದಾಳ್ತನದ ಮೇಲೆ ತೀಕ್ಷ್ಣವೂ ಸಹಾನುಭೂತಿರಹಿತವೂ ಆದ ಟೀಕೆಗಳಾಗುತ್ತಿವೆ. ಇಂಥ ಟೀಕೆಗಳನ್ನು ರಾಜಕೀಯ ವಿರೋಧಿಗಳು ಮಾತ್ರವಲ್ಲದೆ, ವಿಲಕ್ಷಣವೆನಿಸುವಂತೆ ಆ ಮುಂದಾಳುಗಳ ಗೆಳೆಯರಾಗಿದ್ದವರೂ ಮಾಡುತಿದ್ದಾರೆಂಬಲ್ಲಿ ಯಾವ ಸಂದೇಹವೂ ಇಲ್ಲ." ಮಿತ್ರರೂ ಅಸಂತುಷ್ಟರಾಗಿದ್ದಾರೆಂಬ ಸಂಗತಿ ಆತ್ಮಪರೀಕ್ಷೆಗೆ ಪ್ರೇರಕವಾಗಬೇಕಿತ್ತು ಆದರೆ ಅಧಿಕಾರದ ರಾಜಕಾರಣದಲ್ಲಿ ಸಿಲುಕಿದವರಿಗೆ ಆತ್ಮಪರೀಕ್ಷೆಮಾಡಿಕೊಳ್ಳಲು ಎಲ್ಲಿ ವೇಳೆ ದೊರೆಯಬೇಕು ? ಅದ್ದರಿಂದ ಅಂಥ ಸಂದರ್ಭವನ್ನು ಶ್ರೀ ಶಂಕರರಾಯರು ಉಪಯೋಗಿಸಿಕೊಳ್ಳದೆ ಬಿಟ್ಟರು.

ತಮ್ಮ ರಚನಾತ್ಮಕ ಕಾರ್ಯಕ್ರಮವು "ಅಹಿಂಸಾತ್ಮಕ ಸಮಾಜ ಕ್ರಾಂತಿಗೆ ಚೈತನ್ಯ ಸ್ಥಾನವಾಗಬೇಕೆಂದಲ್ಲದೆ ಸಾಮಾಜಿಕ ಸುಧಾರಣೆಯಲ್ಲಿ ಅದೊಂದು ಶಮನೋಪಾಯವಾಗಬೇಕೆಂದು ಗಾಂಧೀಜಿ ಅಪೇಕ್ಷಿಸಿರಲಿಲ್ಲ" ಎಂದು ಶ್ರೀ ಶಂಕರರಾಯರು ಒಪ್ಪಿಕೊಳ್ಳುತ್ತಾರೆ. ಮಾತ್ರವಲ್ಲ, "ಗಾಂಧೀಜಿಯ ರಚನಾತ್ಮಕ ಕಾರ್ಯಕ್ರಮವನ್ನು ಇಡಿಯಾಗಿ ಸ್ವೀಕರಿಸಿ ಹೊಸ ಅಹಿಂಸಾತ್ಮಕ ಸಮಾಜರಚನೆಯ ತಳಹದಿ ಅದೆಂದು ತಿಳಿದು ಅದನ್ನು ಕಾರ್ಯರೂಪದಲ್ಲಿ ತರಲು ಪ್ರಯತ್ನಿಸಿದರೆ ಮಾತ್ರ ಅದರಲ್ಲಿಯ ಕ್ರಾಂತಿಕಾರಕ ಸತ್ವಗಳು ಗೋಚರವಾಗಬಲ್ಲವು," ಎಂದೂ ಅವರೇ ಹೇಳಿದ್ದಾರೆ. ಇಂದಿನ ರಾಜಕಾರಣವು ಹೊಸ ಅಹಿಂಸಾತ್ಮಕ ಸಮಾಜರಚನೆಯನ್ನು ಅಸ್ತಿತ್ವದಲ್ಲಿ ತರುವ ಗುರಿಯನ್ನಿಟ್ಟುಕೊಂಡಿದೆಯೆಂದು ಶ್ರೀ ಶಂಕರರಾಯರ ಹೇಳಿಕೆಯೆ? ಹಾಗಿಲ್ಲದಿದ್ದರೆ, ರಚನಾತ್ಮಕ ಕಾರ್ಯಕರ್ತರು ಬೇರಾವ ಬಗೆಯ ರಾಜಕಾರಣದಲ್ಲೂ ಭಾಗವಹಿಸಲಾರರಾದ ಕಾರಣ, ಅವರು ಶ್ರೀ ಶಂಕರರಾಯರ ಕರೆಗೆ ಓಗೊಡಲಾರರು.

ಸಾಮ್ರಾಜ್ಯವಾದದ ರಾಜಕಾರಣಕ್ಕೂ ರಾಮರಾಜ್ಯದ ರಾಜಕಾರಣಕ್ಕೂ ಇರುವ ಈ ಅಂತರವನ್ನು ಮನದಲ್ಲಿಟ್ಟುಕೊಂಡೇ ಗಾಂಧೀಜಿಯವರು, "ಪ್ರಕೃತ ಸ್ವರೂಪದಲ್ಲಿ, ಅಂದರೆ ಪ್ರಚಾರದ ಸಾಧನ ಮತ್ತು ಪಾರ್ಲಿಮೆಂಟರಿ ಯಂತ್ರವಾಗಿ, ಕಾಂಗ್ರೆಸ್ಸು ಇಂದು ಪ್ರಯೋಜನದ ಅವಧಿಯನ್ನು ದಾಟಿದೆ. ನಗರ ಪಟ್ಟಣಗಳಿಂದ ಭಿನ್ನವಾದ ೭೦ ಲಕ್ಷ ಹಳ್ಳಿಗಳನ್ನು ವ್ಯಾಪಿಸುವ ಸಾಮಾಜಿಕ, ನೈತಿಕ ಮತ್ತು ಆರ್ಥಿಕ ಸ್ವಾತಂತ್ರ್ಯವನ್ನು ಭಾರತ ಇನ್ನೂ ಸಾಧಿಸಬೇಕಾಗಿದೆ," ಎಂದು ಹೇಳಿದ್ದರು. [illegible] ಇಂದು ನಮಗೆ ಬೇಕಾಗಿರುವದು ಹಳೆಯ ತಂತ್ರವಲ್ಲ; ರಾಮರಾಜ್ಯವನ್ನು ಅಸ್ತಿತ್ವಕ್ಕೆ ತರಬಲ್ಲ [illegible].

ಅಂದಾಕ್ಷಣ ಶ್ರೀ ಶಂಕರರಾವಜಿಯವರು ಭಯಪಡುವಂತೆ ನಮ್ಮ [illegible] ಹಳೆಯ ಯೋಧರನ್ನು [illegible] ಬೇಕೆಂದರ್ಥವಲ್ಲ. ಸ್ವತಃ ಗಾಂಧೀಜಿಯವರೇ, ಜವಾಹರಲಾಲಜಿಯವರು ಮುಖ್ಯ ಮಂತ್ರಿಯಾಗಿರುವದಕ್ಕಿಂತಲೂ ಕಿಸಾನ ಮುಖ್ಯಮಂತ್ರಿಯೊಬ್ಬನ ಕಾರ್ಯದರ್ಶಿಯಾಗಿದ್ದರೆ ಲೇಸೆಂದು ಹೇಳಿದ್ದರು. ರಾಜಕಾರಣದ ಧ್ಯೇಯವಾಗಿರುವದು ಕೋಟಿ ನಮ್ಮ ಸಾಮಾಜಿಕ ಮತ್ತು ಆರ್ಥಿಕ ಸ್ವಾತಂತ್ರ್ಯಕ್ಕೆ ಅದೊಂದು ಸಾಧನ ಮಾತ್ರ ಆಗಬೇಕು. ರಚನಾತ್ಮಕ ಕಾರ್ಯಕರ್ತರು ಉಪಯುಕ್ತವಾಗಿ ಭಾಗ ವಹಿಸಬಹುದಾದ ರಾಜಕಾರಣವೆಂದರೆ ಈ ಬಗೆಯದು. ಇದು ಗಾಂಧೀಜಿ ಬಯಸಿದ ಲೋಕ ಸೇವಕ ಸಂಘದ ಸ್ವರೂಪ. ಅದರಲ್ಲಿ ರಾಜಕಾರಣವನ್ನು ತೊರೆದುಬಿಡಬೇಕೆಂದಿಲ್ಲ; ಆದರೆ ಅದನ್ನು ರಚನಾತ್ಮಕವಾದ ಉದಾತ್ತ ಸಾಧನವಾಗಿ ಮಾರ್ಪಡಿಸಿಕೊಳ್ಳಬೇಕಾಗುವದು.

ಅಹಿಂಸಾತ್ಮಕ ಸಮಾಜದ ಈ ಕಲ್ಪನೆ ಕಾಂಗ್ರೆಸ್ಸಿಗೆ ಪ್ರಿಯವಾಗಲಿಲ್ಲವೆಂದು ಶ್ರೀ ಶಂಕರರಾವಜಿಯವರು ಒಪ್ಪಿಕೊಂಡಿದ್ದಾರೆ. ಅವರನ್ನುತ್ತಾರೆ, "೧೯೨೦ ರಲ್ಲಿ ಕಾಂಗ್ರೆಸ್ಸು ಗಾಂಧೀಜಿಯ ಅಹಿಂಸಾತ್ಮಕ ಅಸಹಕಾರ ಮತ್ತು ಸತ್ಯಾಗ್ರಹವನ್ನು ಸ್ವೀಕರಿಸಿದ್ದು ಕೇವಲ ರಾಜಕೀಯ ಸ್ವಾತಂತ್ರ್ಯ ಸಾಧನೆಗಾಗಿ; ಹೊರತು ಗಾಂಧೀಜೀ ಪ್ರದೇಶ(?) ಜೀವನ ಮಾರ್ಗದಲ್ಲಿನ ವಿಶ್ವಾಸದಿಂದ ಇಲ್ಲವೆ ನವ ಸಮಾಜ ರಚನೆಯ ಮೂಲತತ್ವ ಅದೆಂಬ ನಂಬಿಕೆಯಿಂದಲ್ಲ ಈ ಮಾತನ್ನು ಯಾವಾಗಲೂ ಮರೆಯಲಾಗುತಿದೆ ಬಹುಸಂಖ್ಯ ಕಾಂಗ್ರೆಸಿಗರಿಗೆ ಗಾಂಧೀಜಿ ರಾಜಕೀಯ ಧುರೀಣರಾಗಿದ್ದರಲ್ಲದೆ ನೈತಿಕ ಗುರುಗಳಾಗಿದ್ದಿಲ್ಲ.....ಸರಕಾರಿ ಅಧಿಕಾರ ಮತ್ತು ರಚನಾತ್ಮಕ ಕಾರ್ಯದ ಮುಖಾಂತರ ಜನ ಸೇವೆಯ ಸಂಬಂಧದಲ್ಲಿ ಬಹುಸಂಖ್ಯ ಕಾಂಗ್ರೆಸಿಗರು ಸದ್ಯದಲ್ಲಿ ತಾಳಿದ ಧೋರಣದಿಂದ ಈ ಹೇಳಿಕೆಯ ಸತ್ಯತೆ ನಮಗೆ ಕಂಡುಬರುವದು. ಇಂದು ಅವರು ಸೇವೆಗಿಂತ ಅಧಿಕಾರದಲ್ಲಿಯೇ ಹೆಚ್ಚು ಶ್ರದ್ಧೆಯುಟ್ಟದ್ದನ್ನು ನೋಡುವದು ವಿಷಾದಕರವಾಗಿದೆ."

ಇಂಥ ಕಾಂಗ್ರೆಸ ಮತ್ತು ಅದರ ರಾಜಕಾರಣದಿಂದ ಗಾಂಧೀಜಿಯ ತತ್ವಜ್ಞಾನದಲ್ಲಿ ವಿಶ್ವಾಸವಿಟ್ಟ ರಚನಾತ್ಮಕ ಕಾರ್ಯಕರ್ತರು ದೂರ ಸರಿದು ನಿಂತರೆ ಏನಾಶ್ಚರ್ಯ?

ಈ ಕಾರ್ಯಕರ್ತರ ಸಹಕಾರವನ್ನು ಕಾಂಗ್ರೆಸ್ಸು ಅಪೇಕ್ಷಿಸುತಿದ್ದರೆ, ಅವರು ನಂಬಿದ ಧ್ಯೇಯಗಳಿಗೆ ಪೂರ್ಣಾವಕಾಶವನ್ನು ಕೊಡಬೇಕಾಗುವದು. ಆದರೆ ಇಂದು ಕಾಂಗ್ರೆಸ್ ಸರಕಾರಗಳಲ್ಲಾಗಲಿ ಸ್ವತಃ ಕಾಂಗ್ರೆಸ್ಸಿನಲ್ಲಿ ಆಗಲಿ ಅಂಥ ನೀತಿಯ ಒಲವು ಕಾಣುವದಿಲ್ಲ. ಬದಲಿಗೆ ಅದರ ಮುಂದಾಳುಗಳು ರಚನಾತ್ಮಕ ಕಾರ್ಯಕರ್ತರಲ್ಲಿ ಅವಿಶ್ವಾಸವನ್ನು ಪ್ರದರ್ಶಿಸುತ್ತಾರೆ, ಮತ್ತು ಅಧಿಕಾರವನ್ನು ತಮ್ಮ ಕೈಯಲ್ಲೆ ಉಳಿಸಿಕೊಳ್ಳುವ ಮನೋವೃತ್ತಿಯನ್ನವಲಂಬಿಸಿದ್ದಾರೆ. ಇದಕ್ಕೆ ಎರಡೇ ನಿದರ್ಶನಗಳನ್ನು ಕೊಡುವೆ. ಈಚೆಗೆ ಭಾರತ ಸರಕಾರದವರು ನೇಮಿಸಿದ ಗೃಹೋದ್ಯಮ ಮಂಡಲದಲ್ಲಿ ಒಬ್ಬನೂ ರಚನಾತ್ಮಕ ಕಾರ್ಯಕರ್ತನಿಲ್ಲ. ಅದರಲ್ಲಿ ಬಹುಸಂಖ್ಯ ಸದಸ್ಯರು ಹಳೆಯ ಸಾಮ್ರಾಜ್ಯ ನೀತಿಯ ಸರಕಾರಿ ಪ್ರತಿನಿಧಿಗಳು. ಗಾಂಧೀ ರಾಷ್ಟ್ರೀಯ ಸ್ಮಾರಕ ನಿಧಿಯಮಂಡಲದಲ್ಲಿ ಕೂಡ ನೂರಕ್ಕೆ ೬೬–೩.೩ ಅಂಶ ರಾಜಕಾರಣಿಗಳು, ೨೫ ವ್ಯಾಪಾರಿ ಶ್ರೀಮಂತರು ಮತ್ತು ಕೇವಲ ೮.೧/೩ ರಚನಾತ್ಮಕ ಕಾರ್ಯಕರ್ತರಿದ್ದಾರೆ. ರಚನಾತ್ಮಕ ಕಾರ್ಯಕರ್ತರನ್ನು ಆಕರ್ಷಿಸಬೇಕಾದರೆ ಈ ಪದ್ಧತಿ ಹಿಂದುಮುಂದಾಗಬೇಕು. ಜಯಪುರ ಕಾಂಗ್ರೆಸ್ಸಿನ ಸಂದೇಶದ ಪುನಸ್ಸ್ಥಾಪನೆಯಿಂದಲೇ ಯಾವುದೂ ಸಾಧಿಸದು. ಕೃತಿಯಿಂದಲೇ ರಚನಾತ್ಮಕ ಕಾರ್ಯಕರ್ತರಲ್ಲಿ ಭರವಸೆ ಹುಟ್ಟಬೇಕು. ಶ್ರೀ ಶಂಕರರಾವಜಿಯವರು ಹೇಳುತ್ತಾರೆ– "ಅವರು (ಗಾಂಧೀಜಿ) ಹಾಕಿಕೊಟ್ಟ ಧ್ಯೇಯವನ್ನು ಕೈಗೂಡಿಸಬೇಕಾದರೆ ಕಾಂಗ್ರೆಸ್ಸು ತನ್ನ ಸಾಮಾಜಿಕ ಪುನರ್ನಿರ್ಮಾಣ ಯೋಜನೆಗಳಲ್ಲಿ ರಚನಾತ್ಮಕ

–೯ ನೇ ಪುಟಕ್ಕೆ

# ಕರ್ಮವೀರ

ಶ್ರೀಚಾಲುಕ್ಯ ವಿಕ್ರಮ ವರ್ಷ ೮೭೩
ಚೈತ್ರ ಶುದ್ಧ ೬ ಸೋಮವಾರ


## ಸರದಾರರು ದೀರ್ಘಾಯುಗಳಾಗಲಿ

ಹಿಂದುಸ್ತಾನದ ಉಪಮುಖ್ಯ ಮಂತ್ರಿಗಳಾಗಿರುವ ಸರದಾರ ವಲ್ಲಭಭಾಯಿ ಪಟೇಲರು ವಿಮಾನ ಅಪಘಾತದಿಂದ ಪಾರಾದುದಕ್ಕಾಗಿ ನಾವವರನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ. ರಾಜಸ್ತಾನ ಒಕ್ಕೂಟದ ಪ್ರಾರಂಭೋತ್ಸವಕ್ಕಾಗಿ ೨೯ ನೇ ತಾರೀಕು ಸಾಯಂಕಾಲ ೫—೩೦ ಕ್ಕೆ ದಿಲ್ಲಿಯಿಂದ ಹೊರಟಿದ್ದ ಸರದಾರರ ವಿಮಾನವು ಜಯಪುರದಿಂದ ೪೦ ಮೈಲುಗಳ ಮೇಲಿರುವ ಶಹಾಪುರಾದ ಹತ್ತಿರ ಕೆಳಗಿಳಿಯಬೇಕಾಯಿತು. ವಿಮಾನದಲ್ಲಿಯ ಯಂತ್ರವು ಕೆಟ್ಟದ್ದರಿಂದ ಅದನ್ನು ಕೆಳಗಿಳಿಸಬೇಕಾಯಿತಂತೆ. ವೈಮಾನಿಕನು ಅತ್ಯಂತ ದಕ್ಷತೆಯಿಂದ ಯಾರಿಗೂ ಧಕ್ಕೆಯಾಗದಂತೆ ನದೀ ತೀರದ ಹತ್ತಿರ ಅದನ್ನು ಕೆಳಗಿಳಿಸಿದ್ದು ಅಭಿನಂದನೀಯ ಸಂಗತಿಯಾಗಿದೆ. ಅನಿರೀಕ್ಷಿತವಾಗಿ ವಿಮಾನವು ಕೆಳಗಿಳಿಯಬೇಕಾದ್ದರಿಂದ ಸರದಾರರು ಶಹಾಪುರದಿಂದ ಮೋಟರಿನಲ್ಲಿಯೆ ಜಯಪುರಕ್ಕೆ ಹೋಗಬೇಕಾಯಿತು. ಜನರ ಸುಳಿವೆ ಇಲ್ಲದ ಆ ಸ್ಥಳದಲ್ಲಿ ಮೋಟರು ಸಿಕ್ಕುವದೂ ಕಠಿನವಾಗಿತ್ತು. ಆದರೆ ಅಷ್ಟರಲ್ಲಿ ಆಕಾಶವಾಣಿ ಶಾಖೆಯ ಮೋಟರೊಂದು ಅಲ್ಲಿಗೆ ಬಂದದ್ದರಿಂದ ಸರದಾರರು ಆ ಮೋಟರಿನಿಂದ ಜಯಪುರಕ್ಕೆ ಹೋದರು. ಕೇವಲ ೩ ಮುಕ್ಕಾಲುಗಂಟೆಯಲ್ಲಿ ಜಯಪುರ ಮುಟ್ಟಬೇಕಾಗಿದ್ದ ಸರದಾರರು ರಾತ್ರಿ ೯-೩೦ ಗಂಟೆಗೆ ಅಲ್ಲಿಗೆ ಹೋದರು. ಸರದಾರರ ಕಾರ್ಯದರ್ಶಿ ಶ್ರೀ. ಶಂಕರರು ಈ ಘಟನೆಯನ್ನು ವಿವರಿಸಿದ್ದುಂಟು. ಇದೊಂದು ಮನೋರಂಜಕ ಘಟನೆಯೆಂದು ಸರದಾರರು ಅಭಿಪ್ರಾಯ ಪಟ್ಟಿರುವರು. ಸರದಾರರ ವಿಮಾನ ಕಾಣೆಯಾಗಿದೆಂಬ ಸುದ್ದಿ ದಿಲ್ಲಿಗೆ ಬಂದದ್ದರಿಂದ ಎಲ್ಲೆಲ್ಲಿಯೂ ಕಳವಳವುಂಟಾಗಿದ್ದಿತು. ಗೃಹ ಖಾತೆಯ ಕಾರ್ಯದರ್ಶಿ ಮೊದಲಾದವರು ಮುಖ್ಯಮಂತ್ರಿಗಳ ಮನೆಗೆ ಧಾವಿಸಿದರು. ಅವರೆಲ್ಲ ಮುಖ್ಯಮಂತ್ರಿಗಳ ಮನೆಯಲ್ಲಿರುವಾಗಲೆ ಸರದಾರರು ಸುಖರೂಪವಾಗಿ ಜಯಪುರ ಮುಟ್ಟಿದರೆಂಬ ಸುದ್ದಿ ಬಂದದ್ದರಿಂದ ಎಲ್ಲರೂ ಸಂತೋಷಸಾಗರದಲ್ಲಿ ಮುಳುಗಿದರು. ವೈಮಾನಿಕನಿಗೆ ಒಂದ ಸಾವಿರ ರೂಪಾಯಿ ಕಾಣಿಕೆ ಕೊಡುವದಾಗಿ ಮುಂಬಯಿಯ ಶ್ರೀಮಂತರೊಬ್ಬರು ಸಾರಿರುವರು.

ಸರದಾರ ಪಟೇಲರು ಮಹಾತ್ಮಾ ಗಾಂಧಿಯವರ ಧುರೀಣತ್ವದಲ್ಲಿ ಮಾಡಿದ ರಾಷ್ಟ್ರ ಸೇವೆಯು ಅನುಪಮವಾಗಿದೆ. ಹಿಂದುಸ್ತಾನವು ಸ್ವಾತಂತ್ರ್ಯವನ್ನು ಪಡೆದ ನಂತರ ರಾಷ್ಟ್ರವನ್ನು ಒಂದೇ ಆಡಳಿತೆಯಲ್ಲಿ ತರುವದಕ್ಕಾಗಿ ಅವರು ಮಾಡಿದ ಪ್ರಯತ್ನ ಮತ್ತು ಪಡೆದ ಯಶಸ್ಸು ಅದಕ್ಕಿಂತಲೂ ಮಿಗಿಲಾಗಿದೆ. ಅಂತೆಯೆ ಸರದಾರರು ರಾಷ್ಟ್ರಕ್ಕೆ ಅತ್ಯಂತ ಪ್ರಿಯರಾಗಿರುವರು. ಸರದಾರರನ್ನು ಸ್ವಾಗತಿಸುವದಕ್ಕಾಗಿ ಜಯಪುರದಲ್ಲಿ ಕೂಡಿದ್ದ ಸಭೆಯೊಂದರಲ್ಲಿ ಮಾತಾಡುತ್ತ 'ಸಂಸ್ಥಾನ ಸಮೀಕರಣದ ಈ ಪ್ರಶ್ನೆಯಲ್ಲಿ ತಾವು ಕೇವಲ ಏಜಂಟರೆಂದೂ ಪರಮಾತ್ಮನೇ ಸರ್ವ ಕರ್ತೃವೆಂದೂ ಅವರು ನುಡಿದದ್ದು ಯಥೋಚಿತವಾಗಿದ್ದರೂ ಪರಮಾತ್ಮನ ಏಜಂಟನಾಗಿ ಕೆಲಸ ಮಾಡುವ ಶಕ್ತಿ–ಸಾಮರ್ಥ್ಯಗಳು ಸರದಾರರಂಥ ಕೆಲವರಿಗೆ ಮಾತ್ರ ಮೀಸಲಾಗಿರುವವೆಂಬುದು ನಿಶ್ಚಿತವಾಗಿದೆ. ಸಂಸ್ಥಾನ ಜಾಗೀರುಗಳನ್ನು ಹಾಗೆಯೇ ಉಳಿಸುವದರಿಂದ ತಮ್ಮ ಬೇಳೆ ಬೇಯುವದೆಂದು ಬ್ರಿಟಿಶ ಆಳರಸರು ಭಾರತದಲ್ಲಿ ಆ ಪದ್ಧತಿಯನ್ನು ಹಾಗೆಯೇ ಇರಿಸಿದ್ದರು. ಇದರಿಂದ ರಾಷ್ಟ್ರಕ್ಕೆ ಎಷ್ಟು ಹಾನಿಯಾಯಿತೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಿಲ್ಲ. ಇದರ ಮರ್ಮವನ್ನು ತಿಳಿದೇ ಸರದಾರ ಪಟೇಲರು ಇಂದು ಸಂಸ್ಥಾನಗಳನ್ನೆಲ್ಲ ಒಂದೇ ಆಡಳಿತೆಯಲ್ಲಿ ತರಲು ಬದ್ಧಕಂಕಣರಾಗಿದ್ದಾರೆ. ಇದಲ್ಲದೆ ರಾಷ್ಟ್ರದ ಶಾಂತಿ ಸುವ್ಯವಸ್ಥೆಯ ಹೊಣೆಹೊತ್ತು ಸರದಾರರು ಯಶಸ್ವಿಯಾಗಿ ಆ ಕಾರ್ಯವನ್ನು ನಿರ್ವಹಿಸುತ್ತಲಿರುವರು. ಇಂಥ ಮಹತ್ವದ ಸಂಧಿಕಾಲದಲ್ಲಿ ಸರದಾರರು ಅಪಘಾತದಿಂದ ಪಾರಾದುದಕ್ಕಾಗಿ ಭಾರತೀಯರೆಲ್ಲ ಪರಮಾತ್ಮನಿಗೆ ಅತ್ಯಂತ ಋಣಿಯಾಗಿರುವರು. ಸರದಾರ ಪಟೇಲರು ದೀರ್ಘಾಯುಗಳಾಗಿ ಭಾರತದ ಸ್ಥಾನಮಾನಗಳನ್ನು ಹೆಚ್ಚಿಸಿ ಜಗತ್ತಿನಲ್ಲಿ ಅದಕ್ಕೊಂದು ಗೌರವದ ಸ್ಥಾನವನ್ನು ಕಲ್ಪಿಸಿಕೊಡುವಂತೆ ಪರಮಾತ್ಮನು ಅನುಗ್ರಹಿಸಲೆಂದು ನಾವ ನನ್ನು ಅನನ್ಯಭಾವದಿಂದ ಪ್ರಾರ್ಥಿಸುತ್ತೇವೆ.

## ಮೃತ್ಯುಮುಖದಿಂದ ಪಾರಾದ ಸರದಾರ ಪಟೇಲರು



ಬೃಹತ್ ರಾಜಸ್ತಾನ ಒಕ್ಕೂಟದ ಪ್ರಾರಂಭೋತ್ಸವ ನಡೆಸಲು ದಿಲ್ಲಿಯಿಂದ ಜಯಪುರಕ್ಕೆ ಹೊರಟಿದ್ದ ನಮ್ಮ ಉಪಮುಖ್ಯ ಮಂತ್ರಿ ಸರದಾರ ವಲ್ಲಭಭಾಯಿ ಪಟೇಲರು ಭಯಾನಕವಾದ ವಿಮಾನ ಅಪಘಾತದಿಂದ ಪಾರಾದುದು ಕೇವಲ ದೈವಯೋಗವೆಂದು ಹೇಳಬೇಕು. ಅವರು ಈ ದಿವ್ಯದಿಂದ ಪಾರಾಗಿ ಬಂದವರು ಮೊದಲ ಬಾರಿ ಹಿರಿಯೋಲಗದಲ್ಲಿ ಪ್ರವೇಶಿಸಿದಾಗ ಸದಸ್ಯರು ಆನಂದಭರದಲ್ಲಿ ಕುಣಿದಾಡಿ ಜಯಜಯಕಾರ ಮಾಡಿದರು.

# ವಾರದ ಸಿಂಹಾವಲೋಕನ

## ಸಂಸ್ಥಾನಗಳ ರಾಜ್ಯಘಟನೆ

ಹಿಂದುಸ್ತಾನವು ಸ್ವಾತಂತ್ರ್ಯವನ್ನು ಪಡೆದ ಈ ಅಲ್ಪಾವಧಿಯಲ್ಲಿಯೇ ಸರಕಾರವು ಸಂಸ್ಥಾನ ಸಮೀಕರಣದ ಪ್ರಶ್ನೆಯನ್ನು ಭರದಿಂದ ಕೈಕೊಂಡು ಅನೇಕ ಸಂಸ್ಥಾನಗಳನ್ನು ವಿಲೀನ ಮಾಡಿಬಿಟ್ಟದ್ದು ಸರ್ವಶ್ರುತ. ವಿಲೀನವಾಗದಿದ್ದ ಸಂಸ್ಥಾನಗಳು ಒಕ್ಕೂಟಗಳನ್ನು ರಚಿಸಿಕೊಂಡಿವೆ. ಇನ್ನು ಹಲವೇ ಸಂಸ್ಥಾನಗಳು ಸಂಸ್ಥಾನಗಳೆಂಬ ನಾಮದಿಂದ ರಾಜ್ಯಕಾರಭಾರ ನಡೆಸಿವೆ. ಇವನ್ನಾದರೂ ಒಕ್ಕೂಟ ಸರಕಾರದಲ್ಲಿಯ ಪ್ರಾಂತಗಳ ಮಟ್ಟಕ್ಕೆ ತರುವ ಧೋರಣವನ್ನು ಸಂಸ್ಥಾನ ಶಾಖೆಯ ಮಂತ್ರಿವರ್ಯ ಸರದಾರ ವಲ್ಲಭಭಾಯಿಯವರು ಇಟ್ಟುಕೊಂಡಿರುವರು. ಹೀಗಿದ್ದರೂ ಸಂಸ್ಥಾನಗಳ ಆದರ್ಶ ರಾಜ್ಯಘಟನೆಯೆಂತಿರಬೇಕೆಂಬ ಬಗೆಗೆ ಶ್ರೀ ಬೆನಗಲ್ಲ ನರಸಿಂಗರಾಯರ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ನೇಮಿಸಲಾಗಿತ್ತು. ಈ ಸಮಿತಿಯವರು ಈಗ ತಮ್ಮ ವರದಿಯನ್ನು ಒಪ್ಪಿಸಿರುವರು. ಸಂಸ್ಥಾನಗಳ ರಾಜ್ಯಘಟನೆಯು ಹೊಸ ಹಿಂದೀ ರಾಜ್ಯ ಘಟನೆಯಲ್ಲಿಯ ಪ್ರಾಂತಗಳ ಘಟನೆಯನ್ನೇ ಬಹಳ ಮಟ್ಟಿಗೆ ಹೋಲುತ್ತದೆ. ಸಂಸ್ಥಾನಿಕರು ಅಧಿಪತಿಗಳಾಗಿ ಉಳಿಯಬಲ್ಲರು. ಪ್ರಾಂತಗಳ ಗವರ್ನರರನ್ನು ಹಿಂದೀ ಒಕ್ಕೂಟದ ಅಧ್ಯಕ್ಷರು ನೇಮಿಸುವಂತೆ ಸಂಸ್ಥಾನಗಳ ನರೇಂದ್ರರಾದರೂ ಸಂಸ್ಥಾನಗಳ ಅಧಿಪತಿಯೆಂದು ಹಿಂದೀ ಒಕ್ಕೂಟದ ಅಧ್ಯಕ್ಷರಿಂದ ತಾತ್ಪೂರ್ತಿಕವಾಗಿ ಮನ್ನಿಸಲ್ಪಟ್ಟ ವ್ಯಕ್ತಿಯಾಗಿರತಕ್ಕದ್ದೆಂದು ಹೇಳಲಾಗಿದೆ. ಇಂಥ ಅಧಿಪತಿಯು ರಾಜ್ಯಘಟನೆಯಂತೆ ನಡೆದುಕೊಳ್ಳದಿದ್ದರೆ ಅಧ್ಯಕ್ಷರು ತಮ್ಮ ಮನ್ನಣೆಯನ್ನು ಹಿಂತೆಗೆದುಕೊಂಡು ಮತ್ತೊಬ್ಬ ಯೋಗ್ಯ ಅಧಿಕಾರಿಯನ್ನು ಆರಿಸಬಹುದಾಗಿದೆ. ಸಂಸ್ಥಾನಗಳು ಒಂದು ಅಥವಾ ಎರಡು ಶಾಸನ ಸಭೆಗಳನ್ನಿಟ್ಟುಕೊಳ್ಳಬಹುದು. ಇವುಗಳ ಘಟನೆಯನ್ನು ಹಿಂದೀ ಪಾರ್ಲಮೆಂಟು ನಿರ್ಧರಿಸುವದು. ಏಕೆಂದರೆ ಇಡೀ ಹಿಂದುಸ್ತಾನದಲ್ಲಿ ಒಂದೇ ಬಗೆಯ ಪದ್ಧತಿಯನ್ನು ಕಾಯ್ದುಕೊಳ್ಳುವದು ಅವಶ್ಯವಾಗಿದೆ. ಸಂಸ್ಥಾನಿಕರ ಆದಾಯದ ಮೇಲಿಂದ ಅವರ ಸಂಬಳವನ್ನು ನಿರ್ಧರಿಸಲಾಗುವದು. ರಾವ ಸಮಿತಿಯ ಈ ಘಟನೆಗೆ ಬೇರೆ ಬೇರೆ ಸಂಸ್ಥಾನಗಳಲ್ಲಿರುವ ಘಟನಾ ಸಮಿತಿಗಳು ಒಪ್ಪಿಗೆಕೊಟ್ಟರೆ ಇದಕ್ಕೆ ಅವಕಾಶ ಮಾಡಿಕೊಡಲು ಹಿಂದೀ ರಾಜ್ಯ ಘಟನೆಯಲ್ಲಿ ಒಂದು ಕಲಮು ಸೇರಿಸಲಾಗುವದೆಂದೂ ಈ ವರದಿಯಲ್ಲಿ ಹೇಳಿದೆ. ಇಡೀ ಹಿಂದುಸ್ತಾನದಲ್ಲಿ ಒಂದೇ ಬಗೆಯ ರಾಜ್ಯಪದ್ಧತಿಯಿರಬೇಕೆಂಬ ದೃಷ್ಟಿಯಿಂದ ಮಾಡಲ್ಪಟ್ಟ ಈ ಸೂಚನೆಗಳು ಸರ್ವಮಾನ್ಯವಾಗಬಹುದಾಗಿದೆ. ಇನ್ನೂ ಕೆಲಕಾಲ ಉಳಿಯಬಹುದಾದ ಸಂಸ್ಥಾನಗಳು ಇಂಥ ಆದರ್ಶ ರಾಜ್ಯಘಟನೆಯನ್ನು ಇಟ್ಟುಕೊಂಡು ಮುಂದೆ ಸಾಗಿದರೆ ಉದ್ದೇಶವು ಬೇಗ ಸಾಧ್ಯವಾಗಬಲ್ಲದು.

## ಕಾಮನ್‌ವೆಲ್ಥ ರಾಷ್ಟ್ರಗಳು

ಇದೇ ಏಪ್ರಿಲ ೨೧ ಕ್ಕೆ ಲಂಡನದಲ್ಲಿ ಕಾಮನ್‌ವೆಲ್ಥ ರಾಷ್ಟ್ರಗಳ ಮುಖ್ಯ ಮಂತ್ರಿಗಳ ಪರಿಷತ್ತು ಸೇರಲಿದೆ. ಈ ಪರಿಷತ್ತಿನಲ್ಲಿ ರಾಜ್ಯಘಟನೆ ಮೊದಲಾದ ಮಹತ್ವದ ಪ್ರಶ್ನೆಗಳ ಚರ್ಚೆ ನಡೆಯಲಿರುವವರಿಂದ ಅನೇಕ ರಾಜಕಾರಣಿಗಳ ಲಕ್ಷ್ಯವು ಅತ್ತ ವೇಧಿಸಿದೆ ಹಿಂದುಸ್ತಾನದ ಮುಖ್ಯಮಂತ್ರಿ ಪಂಡಿತ ಜವಾಹರಲಾಲರೂ ಈ ಪರಿಷತ್ತಿಗೆ ಹೋಗಲಿರುವರು. ಈ ಪರಿಷತ್ತಿನ ಬಗ್ಗೆ ಬ್ರಿಟಿಶ ಮುಖ್ಯ ಮಂತ್ರಿಗಳು ಕಾಮನ್ಸ ಸಭೆಯಲ್ಲಿ ಹೇಳಿಕೆಯೊಂದನ್ನು ಕೊಡುತ್ತ ಕಾಮನವೆಲ್ಥ ರಾಷ್ಟ್ರಗಳ ಮುಖ್ಯ ಮಂತ್ರಿಗಳು ಈ ಪರಿಷತ್ತಿಗೆ ಬರಲಿರುವರೆಂದು ಹೇಳಿದ್ದಾರೆ. ಬ್ರಿಟಿಶ ಅರಸರನ್ನು ಕಾಮನ್‌ವೆಲ್ಥದ ಪ್ರಥಮ ನಾಗರಿಕನೆಂದೆಣಿಸಿ ಕಾಮನ್‌ವೆಲ್ಥದಲ್ಲಿ ಸೇರುವ ಎಲ್ಲ ರಾಷ್ಟ್ರಗಳ ನಾಗರಿಕರಿಗೂ ದ್ವಿವಿಧ ನಾಗರಿಕತ್ವ ಕೊಡಬೇಕೆನ್ನುವದೇ ಮಹತ್ವದ ಸೂಚನೆಯಾಗಿದೆ. ಹಿಂದುಸ್ತಾನ ಸರಕಾರದವರು ತಮ್ಮ ನಿಲುವೆಯನ್ನು ಈ ಮೊದಲು ಸಾರಿದ್ದಾರೆ. ಆ ಧೋರಣಕ್ಕನುಸಾರವಾಗಿಯೆ ತಾವು ಈ ಪರಿಷತ್ತಿನಲ್ಲಿ ನಡೆಯುವುದಾಗಿ ಮುಖ್ಯ ಮಂತ್ರಿಗಳು ಹಿರಿಯೋಲಗದಲ್ಲಿ ಸ್ಪಷ್ಟಪಡಿಸಿದ್ದಾರೆ. ಭಾರತದ ಗೌರವಕ್ಕೆ ತಕ್ಕ ರೀತಿಯಲ್ಲಿ ಹಿಂದುಸ್ತಾನ ಸರಕಾರವು ಕಾಮನ್‌ವೆಲ್ಥ ರಾಷ್ಟ್ರಗಳೊಡನೆ ಸಂಬಂಧವನ್ನಿಟ್ಟುಕೊಳ್ಳುವದೆಂಬಲ್ಲಿ ಸಂದೇಹವಿಲ್ಲ. ಕಾಮನ್‌ವೆಲ್ಥ ರಾಷ್ಟ್ರಗಳ ಈ ಪರಿಷತ್ತಿನಿಂದ ಹಿಂದುಸ್ತಾನದ ಸ್ಥಾನಮಾನಗಳು ಇನ್ನಷ್ಟು ಹೆಚ್ಚುವವೆಂದು ನಮಗೆ ಬಲವಾದ ಆಸೆಯಿದೆ.

## ವಾರ್ತಾ ಪ್ರಸಾರದ ಮಹತ್ವ

ಹಿಂದುಸ್ತಾನ ಸರಕಾರದ ಸುದ್ದಿ ಮತ್ತು ಆಕಾಶವಾಣಿ ಶಾಖೆಯ ಮಂತ್ರಿಗಳಾದ ಶ್ರೀ ದಿವಾಕರ ರಂಗರಾಯರು ತಮ್ಮ ಶಾಖೆಯ ಬೇಡಿಕೆಗಳನ್ನು ಹಿರಿಯೋಲಗದಲ್ಲಿ ಮಂಡಿಸುತ್ತ ಬಾನುಲಿ ಮತ್ತು ವಾರ್ತಾ ಪ್ರಸಾರದ ಮಹತ್ವವನ್ನು ಬಣ್ಣಿಸಿರುವರು–ರಾಷ್ಟ್ರ ರಚನೆಗೆ ಅತ್ಯವಶ್ಯವಾದ ಈ ಶಾಖೆಯ ಕಾರ್ಯಕಲಾಪಗಳನ್ನು ವಿಸ್ತರಿಸುವ ತಮ್ಮ ಯೋಜನೆಗಳನ್ನೂ ವಿವರಿಸಿದರು. ಹಿಂದುಸ್ತಾನದಂಥ ವಿಶಾಲವಾದ ದೇಶದ ಮೂಲೆ ಮೂಲೆಗೆ ಸುದ್ದಿ ಮುಟ್ಟಬೇಕಾದರೆ ಬಾನುಲಿ ಯೋಜನೆಯ ಪ್ರಸಾರ ಹೆಚ್ಚುವದು ಅವಶ್ಯವಾಗಿದೆ. ಪರಕೀಯ ಸರಕಾರವಿರುವಾಗ ಈ ಬಾನುಲಿಯ ಉಪಯೋಗವನ್ನು ಅದು ಕೇವಲ ಅದರ ಪ್ರಚಾರ ಕಾರ್ಯಕ್ಕಾಗಿ ಮಾಡಲಾಗುತಿದ್ದಿತು. ಆದರೀಗ ಪ್ರಜಾಪ್ರಭುತ್ವವು ಹಿಂದುಸ್ತಾನದಲ್ಲಿ ಸ್ಥಾಪಿತವಾದ್ದರಿಂದ ಆ ಬಗೆಯ ಅಂಜಿಕೆಯುಳಿದಿರುವದಿಲ್ಲ. ಆದುದರಿಂದ ರಾಷ್ಟ್ರೀಯ ಸರಕಾರದವರು ಇಟ್ಟುಕೊಂಡ ವಾರ್ತಾಪ್ರಸಾರಕ ಯೋಜನೆಗಳಿಗೆಲ್ಲ ಜನತೆಯು ತುಂಬ ಸಹಕಾರ ನೀಡುವದೆಂಬಲ್ಲಿ ಸಂದೇಹವಿಲ್ಲ. ವಾರ್ತಾಪ್ರಸಾರದ ಈ ಮಹತ್ವದ ಕಾರ್ಯದಲ್ಲಿ ಪತ್ರಿಕೆಗಳು ಮಹತ್ವದ ಪಾತ್ರವನ್ನು ವಹಿಸಬಹುದೆಂಬುದನ್ನು ಪತ್ರಿಕಾ ವ್ಯವಸಾಯದ ಚಿರಪರಿಚಯವಿದ್ದ ಮಾನ್ಯ ಮಂತ್ರಿಗಳು ತಮ್ಮ ಭಾಷಣದಲ್ಲಿ ನಿವೇದಿಸಿರುವರು. ಅದರಲ್ಲಿಯೂ ದೇಶಭಾಷಾ ಪತ್ರಿಕೆಗಳು ಈ ಕಾರ್ಯವನ್ನು ಯಶಸ್ವಿಯಾಗಿ ಮಾಡಬಲ್ಲವೆಂಬುದನ್ನು ಅವರು ಮನಗಂಡಿರುವರು. ಈ ಮಹತ್ವದ ಕಾರ್ಯದಲ್ಲಿ ಅವರಿಗೆ ಎಲ್ಲ ಬಗೆಯ ಸಹಾಯ ಮಾಡಲು ಮಂತ್ರಿಗಳು ಆಶ್ವಾಸನ ಕೊಟ್ಟದ್ದು ಅಭಿನಂದನೀಯ ಮತ್ತು ಸ್ವಾಗತಾರ್ಹವಾಗಿದೆ.

## ಎಸ್. ಎಸ್. ಸಿ ಪರೀಕ್ಷೆ

ಈ ಸಲದ ಮುಂಬಯಿ ಸರಕಾರದ ಎಸ್. ಎಸ್. ಸಿ. ಪರೀಕ್ಷೆಯಲ್ಲಿ ಆದ ಅವ್ಯವಸ್ಥೆಯ ಬಗ್ಗೆ ಪತ್ರಿಕೆಗಳಲ್ಲಿ ಬಗೆ ಬಗೆಯ ದೂರುಗಳು ಪ್ರಸಿದ್ಧವಾಗಿವೆ. ಇಷ್ಟು ದಿನಗಳ ವರೆಗೆ ಮುಂಬಯಿ ವಿಶ್ವವಿದ್ಯಾಲಯದವರು ಮ್ಯಾಟ್ರಿಕ ಪರೀಕ್ಷೆಯನ್ನು ತೆಗೆದುಕೊಳ್ಳುತಿದ್ದರು. ಆ ಪರೀಕ್ಷೆಯಲ್ಲಿ ತೇರ್ಗಡೆಯಾಗುವದೆಂದರೆ ವಿಶ್ವವಿದ್ಯಾಲಯ ಪ್ರವೇಶ ಮತ್ತು ಸರಕಾರಿ ನವಕರಿಗಳಿಗೆ ಮುಕ್ತದ್ವಾರವೆಂದು ಭಾವಿಸಲಾಗುತಿದ್ದಿತು. ಆದರೆ ಸರಕಾರದವರಿಗೆ ಈ ಪ್ರವೇಶ ಪರೀಕ್ಷೆಯನ್ನು ವಿಶ್ವವಿದ್ಯಾಲಯದ ಆಡಳಿತೆಗೆ ಬಿಟ್ಟುಕೊಡುವದು ಬೇಕಾಗಿರಲಿಲ್ಲವಾದ್ದರಿಂದ ಅವರು ಶಾಸನ ಸಭೆಯಲ್ಲಿ ಮಸೂದೆಯೊಂದನ್ನು ಪಾಸುಮಾಡಿಸಿಕೊಂಡು ಈ ಪ್ರವೇಶ ಪರೀಕ್ಷೆಯ ನಿಯಂತ್ರಣವನ್ನು ತಮ್ಮ ಕಡೆಗೆ ತೆಗೆದುಕೊಂಡರು. ಈ ಮಸೂದೆಯನ್ವಯ ಎಸ್. ಎಸ್. ಸಿ ಪರೀಕ್ಷೆಯ ಸಮಿತಿಯೊಂದು ಸ್ಥಾಪಿತವಾಯಿತು. ಆ ಸಮಿತಿಯ ನಿಯಂತ್ರಣದಲ್ಲಿಯೇ ಈ ಸಲ ಈ ಪರೀಕ್ಷೆ ನಡೆಯಿತು. ಈ ಪರೀಕ್ಷೆಗೆ ಈ ಸಲ ಸುಮಾರು ೫೦ ಸಾವಿರದಷ್ಟು ವಿದ್ಯಾರ್ಥಿ ವಿದ್ಯಾರ್ಥಿನಿಯರು ಕುಳಿತಿದ್ದರು. ಈ ಪರೀಕ್ಷೆಯಲ್ಲಿಯ ಅವ್ಯವಸ್ಥೆಯ ಉದಾಹರಣೆಗಳನ್ನು ಒಂದೊಂದಾಗಿ ವಿಚಾರಿಸಿದರೆ ಸಮಿತಿಯವರು ಈ ಕಾರ್ಯಕ್ಕೆ ಎಷ್ಟು ಅಯೋಗ್ಯರಿರುವರೆಂಬುದು ಗೊತ್ತಾಗುವದು. ಅನೇಕ ವಿದ್ಯಾರ್ಥಿಗಳಿಗೆ ಅವರ ನಂಬರುಗಳೇ ಗೊತ್ತಾಗಲಿಲ್ಲ. ಸ್ಥಳವನ್ನು ಹುಡುಕುವುದಕ್ಕಾಗಿ ಅತ್ತಿಂದಿತ್ತ ಅಲೆದಾಡಬೇಕಾಯಿತು. ಪ್ರಶ್ನೆಪತ್ರಿಕೆಗಳನ್ನು ಹಿಂದಿನಂತೆ ಆಯಾ ಕೇಂದ್ರಗಳಲ್ಲಿ ಮುದ್ರಿಸದೆ, ಎಲ್ಲವನ್ನೂ ಒಂದೆಡೆ ಮುದ್ರಿಸಿದ್ದರಿಂದ ಮತ್ತು ಆಯಾ ಕೇಂದ್ರಗಳಿಗೆ ಅವಶ್ಯವಿದ್ದಷ್ಟು ಪ್ರಶ್ನೆ ಪತ್ರಿಕೆಗಳು ಬಾರದ್ದರಿಂದ ಬಹಳ ತೊಂದರೆಯಾಯಿತು. ಕೆಲವು ಕಡೆ ಸಾಯಿಕ್ಲೊಸ್ಟಾಯಿಲ್ ಪೇಪರ ಕೊಡಲ್ಪಟ್ಟರೆ ಬೇರೆ ಹಲವು ಕಡೆ ಪ್ರಶ್ನೆ ಪತ್ರಿಕೆ ಕೊಡುವದಾಗದೆ ವಿದ್ಯಾರ್ಥಿಗಳನ್ನು ಹಾಗೆಯೇ ಮರೆಗೆ ಕಳಿಸಿದ ಸುದ್ದಿ ಇದೆ. ಅಲ್ಲದೆ ಹಲವು ಕೇಂದ್ರಗಳಲ್ಲಿ ಪ್ರಶ್ನೆ ಪತ್ರಿಕೆಗಳ ಗೌಪ್ಯ ಸ್ಫೋಟವಾಯಿತೆಂದೂ ತಿಳಿದು ಬರುತ್ತದೆ. ಇನ್ನೂ ಒಂದು ಮಹತ್ವದ ಸಂಗತಿಯೆಂದರೆ ಉತ್ತರ ಪತ್ರಗಳನ್ನು ಯಾರಾರಿಗೆ ಕಳಿಸಬೇಕೆಂಬುದರ ಬಗ್ಗೆ ಸೂಚನೆಗಳು ಬಾರದ್ದರಿಂದ ಹಲವು ಕಡೆ ಅವನ್ನೆಲ್ಲ ಒಂದು ಕೋಣೆಯಲ್ಲಿ ಹಾಕಿ ಬೀಗಹಾಕಿ ಇಡಲಾಯಿತೆಂದೂ ತಿಳಿಯುತ್ತದೆ. ಸರಕಾರದವರು ಈ ಎಲ್ಲದರಬಗ್ಗೆ ನಿದಾರ್ಕ್ಷಿಣ್ಯವಾಗಿ ವಿಚಾರಮಾಡಬೇಕಲ್ಲದೆ ಪರೀಕ್ಷೆಯ ಪರಿಣಾಮವನ್ನು ಸಾರುವಾಗ ಹೆಚ್ಚು ಜಾಗರೂಕತೆ ವಹಿಸಬೇಕೆಂದು ನಾವು ಸೂಚಿಸಬಯಸುತ್ತೇವೆ. ಈ ಅವ್ಯವಸ್ಥೆಯ ಪರಿಣಾಮದಿಂದ ಯಾವ ಯೋಗ್ಯ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೂ ಹಾನಿಯಾಗದಂತೆ ನೋಡಿಕೊಳ್ಳುವದು ಸಮಿತಿಯ ಮತ್ತು ಸರಕಾರದ ಕರ್ತವ್ಯವಾಗಿದೆಯೆಂದು ಪ್ರತ್ಯೇಕ ಹೇಳಬೇಕಿಲ್ಲ.

# ಖೇದಜನಕ ಮನೋವೃತ್ತಿ

ಈ ಪ್ರತಿಯ ಇನ್ನೊಂದು ಭಾಗದಲ್ಲಿ ನನ್ನ ಸಹೋದ್ಯೋಗಿ ಶ್ರೀ ಜೆ. ಸಿ. ಕುಮಾರಪ್ಪನವರ "ಅಂದಿನ ಮತ್ತು ಇಂದಿನ ರಾಜಕಾರಣ" ಎಂಬ ಲೇಖನವನ್ನು ಓದುಗರು ನೋಡಬಹುದು. ತನ್ನ ಕಲ್ಪನೆಗಳನ್ನು ವಿಕಾಸಗೊಳಿಸಲು ಶ್ರೀ ಶಂಕರರಾವ ದೇವರವರು ಶ್ರೀ ಕುಮಾರಪ್ಪನವರ ಬರಹದಿಂದ ಒಂದು ಪಾಠವನ್ನು ತೆಗೆದುಕೊಂಡದ್ದು ದುರ್ದೈವವೆನ್ನಬೇಕು. ಅವರು ಅದನ್ನು ಸ್ವತಂತ್ರವಾಗಿಯೇ ವಿಕಾಸಗೊಳಿಸಬಹುದಾಗಿತ್ತು. ಸ್ಪಷ್ಟ ರೀತಿಯಿಂದ ಬರಹ ಉದ್ಧೃತವಾದುದರಿಂದ ಶ್ರೀ ಕುಮಾರಪ್ಪನವರ ಉತ್ತರಕ್ಕೂ ಸ್ಥಳಕೊಡಬೇಕಾಯಿತು. ಆದರೆ ಈ ಚರ್ಚೆ "ಹರಿಜನದಲ್ಲಿ" ಬೆಳೆಯಲು ನಾನು ಬಿಡಲಾರೆ. ಗಾಂಧಿಯವರ ರಚನಾತ್ಮಕ ಅನುಯಾಯಿಗಳು ಅವರ ರಾಜಕಾರಣಿಗಳಾದ ಅನುಯಾಯಿಗಳೊಡನೆ ಹಗೆತನದ ಭಾವವನ್ನು ತಾಳಿ ತಮ್ಮ ಶಕ್ತಿಯನ್ನು ಟೀಕೆಮಾಡುವುದರಲ್ಲಿ ವ್ಯಯಮಾಡುತ್ತಿರುವುದು ನನಗೆ ಬಹಳ ನೋವನ್ನುಂಟುಮಾಡಿದೆ. ಅದು ಯಾವರೀತಿಯಿಂದಲೂ ದೇಶಕ್ಕೆ ಉಪಕಾರಿಯಾಗದು ಮತ್ತು ರಚನಾತ್ಮಕ ಕಾರ್ಯಕ್ರಮವನ್ನು ಒಂದಂಗುಲದಷ್ಟಾದರೂ ಮುಂದೆ ಹಾಯಿಸದು.

ವಿನೋಬಾ, ಕಾಕಾ ಕಾಲೇಲಕರ, ಕುಮಾರಪ್ಪ ಮತ್ತು ಇತರರನ್ನು ಗಾಂಧಿಯವರು ಬಹಳವಾಗಿ ಗೌರವಿಸುತ್ತಿದ್ದರೂ ಪಂಡಿತ ಜವಾಹರಲಾಲರೇ ತಮ್ಮ ನಂತರ ಬರತಕ್ಕ ಅಧಿಕಾರಿಗಳು ಎಂದು ಹೇಳಲು ಏನೂ ಸಂಕೋಚಪಡಲಿಲ್ಲ ಮತ್ತು ಅವರೊಡನೆ ತಮ್ಮ ಜೀವನದ ಕೊನೆಯಗಳಿಗೆಯವರೆಗೂ ಸಹಕರಿಸುವುದನ್ನು ಬಿಡಲಿಲ್ಲ. ಸರದಾರರೊಡನೆ ಮಾತನಾಡಿ ಮುಗಿಸಿದ ಐದೇ ನಿಮಿಷಗಳಲ್ಲಿ ಅವರಿಗೆ ಗುಂಡು ತಾಗಿತು. ಅವರು ರಚನಾತ್ಮಕ ಕಾರ್ಯಕ್ರಮದ ಬಗ್ಗೆ ಸಹಕಾರ ನೀಡುವುದರಲ್ಲಿ ಸರಕಾರಕ್ಕೆ ಯಾವ ಶರ್ತನ್ನೂ ಹಾಕಲಿಲ್ಲ. ಗಾಂಧೀಸ್ಮಾರಕ ನಿಧಿಯ ವಿಶ್ವಸ್ತರ ಸಂಘದಲ್ಲಿರುವ ಎಲ್ಲ(ಅಥವಾ ಅನೇಕ ಹೆಸರುಗಳ ಬಗ್ಗೆ) ಮೇಲೆ ತಿರಸ್ಕಾರವನ್ನು ವ್ಯಕ್ತಪಡಿಸಲಾಗಿದೆ. ಆ ಹೆಸರುಗಳನ್ನು ಹೊತ್ತವರೆಲ್ಲರೂ ಕಸ್ತೂರಬಾ ವಿಶ್ವಸ್ತ ಮಂಡಲಕ್ಕೂ ಬಾಪುವಿನ ಸಹವಿಶ್ವಸ್ತರಾಗಿದ್ದರು. ಮತ್ತು ಬಾಪು ಅವರನ್ನು ಸಂಬಂಧಕ್ಕೆ ಅನರ್ಹರೆಂದು ಭಾವಿಸಿರಲಿಲ್ಲ. ಹಾಗಿರುವಾಗ ನಾವೇಕೆ ಹಾಗೆ ಭಾವಿಸಬೇಕು? ಶತಾಂಶಗಳನ್ನು ಹೇಳಿರುವುದು ಅಪಾರ್ಥದ್ಯೋತಕವಾಗಿದೆ. ಶ್ರೀ ಕುಮಾರಪ್ಪನವರ ವರ್ಗೀಕರಣ ಸರಿಯೆಂದು ಒಮ್ಮೆ ಒಪ್ಪಿದರೂ ಕಡೆಯ ಪಕ್ಷ ಇಬ್ಬರು ರಚನಾತ್ಮಕ ಕಾರ್ಯಕರ್ತರಾದರೂ ಗಾಂಧೀಸ್ಮಾರಕ ಸಂಘದ ವಿಶ್ವಸ್ತರಾಗಲು ಒಪ್ಪದುದು ನನಗೆ ಗೊತ್ತಿದೆ. ಅವರು ಒಪ್ಪಿದರೆ ಅವರ ಶತಾಂಶ ೧೫%ಕ್ಕಿಂತ ಹೆಚ್ಚಾಗುತ್ತಿತ್ತು. ಬರಿಯ ಸಂಖ್ಯೆಯಷ್ಟೇ ಗಣ್ಯವಾದರೆ ಅವರ ಶತಾಂಶವನ್ನು ಕಡಿಮೆಮಾಡಿಕೊಳ್ಳಲು ಅವರಲ್ಲದೆ ಮತ್ತಾರು ಹೊಣೆಗಾರರು? ರಚನಾತ್ಮಕ ಕಾರ್ಯಕರ್ತರಾದ ನಮ್ಮಲ್ಲಿ ಕಾಂಗ್ರೆಸ್ ಮುಖಂಡರಿಗೆ ಸಾಕಷ್ಟು ವಿಶ್ವಾಸವಿಲ್ಲದಿದ್ದರೆ, ಜನರಲ್ಲಿ ತಾವು ನೇರವಾಗಿ ಮಾಡುವ ಕೆಲಸಗಳ ಮೂಲಕ ಅವರನ್ನು ನಮ್ಮತ್ತ ಸೆಳೆದುಕೊಳ್ಳುವ ನಮ್ಮ ಶಕ್ತಿ ಮತ್ತು ಅಧಿಕಾರಗಳನ್ನು ಸಿದ್ಧಮಾಡಿತೋರಿಸುವುದರಿಂದ ವಿಶ್ವಾಸವನ್ನು ಪುನಃ ಹುಟ್ಟಿಸುವುದು ನಮ್ಮ ಪಾಲಿನ ಕರ್ತವ್ಯ. ಜನರು ನಮ್ಮನ್ನು ಅನುಸರಿಸಿದರೆ ಕಾಂಗ್ರೆಸ್ಸಿಗರು ಅಥವಾ ಸ್ವತಃ ಸರಕಾರಗಳೇ ನಮ್ಮನ್ನು ಅನುಸರಿಸದಿದ್ದಲ್ಲಿ ಲಕ್ಷ್ಯ ಮಾಡತಕ್ಕದ್ದೇನಿದೆ? ಕೇವಲ ಟೀಕೆ ಮಾಡಿದ ಮಾತ್ರಕ್ಕೆ ವಿಶ್ವಾಸವನ್ನು ಹುಟ್ಟಿಸಲು ಬರದು. ಹಗಲೂ ರಾತ್ರಿಯೂ ನಾವು ಅಹಿಂಸೆಯನ್ನು ಹೊಗಳಿದೆವು, ಹರಿಜನರ ಅಸ್ಪೃಶ್ಯತೆಯನ್ನು ಹೊಡೆದೋಡಿಸಲು ಕಾದಿದೆವು. ರಾಜಕೀಯ ಕ್ಷೇತ್ರದಲ್ಲಿರುವ ನಮ್ಮ ಸಹಚರರಿಗೂ ಅದೇ ಅಹಿಂಸೆಯನ್ನು ತೋರಿಸೋಣ; ಅವರನ್ನು ಸಂಬಂಧಕ್ಕೆ ಅಯೋಗ್ಯವಾದ ಹೊಸದೊಂದು ಜಾತಿಯವರೆಂದು ಗಣಿಸುವುದು ಬೇಡ. ಗಾಂಧಿಯವರು ತಮ್ಮವನೆಂದು ಗಣಿಸಿದ ಒಬ್ಬ ವ್ಯಕ್ತಿ—ಅವನು ಜವಾಹರಲಾಲರಿರಲಿ, ಬಿರ್ಲಾ ಆಗಿರಲಿ, ಅವರ ಆಶ್ರಮದ ಹೊಸ ಅಂತರ್‌ವಾಸಿಯಾಗಿರಲಿ ಅಥವಾ ವಾಲ್ಮೀಕಿ ವಸತಿಯ ಒಬ್ಬ ಭಂಗಿಯಾಗಿರಲಿ. ಅವನು ನಮಗೆ ದ್ವೇಷ್ಯನಾಗಲಾರನು, ಆಗಕೂಡದು.

ಒಬ್ಬ ಒಕ್ಕಲಿಗನು ಮುಖ್ಯಮಂತ್ರಿಯಾಗಿದ್ದರೆ ಬಹಳ ಚೆನ್ನಾಗಿರುತ್ತಿತ್ತು; ಜವಾಹರಲಾಲರನ್ನು ಅವನ ಹತ್ತಿರ ಕಾರ್ಯದರ್ಶಿಯಾಗಿ ಕೆಲಸ ಮಾಡಲು ನಾವು ನಿಯಮಿಸುತಿದ್ದೆವು ಎಂದು ಗಾಂಧಿಯವರು ಹೇಳಿದ್ದು ಖಂಡಿತವಾದ ಮಾತು. ಒಬ್ಬ ಹರಿಜನರ ಹುಡುಗಿಯನ್ನು ಗವರ್ನರ ಜನರಲ್ಲರನ್ನಾಗಿ ನಿಯಮಿಸುತ್ತಿದ್ದೆವೆಂದೂ ಅವರು ಹೇಳಿದ್ದರು. ಗುಜರಾಥಿನ ವಿದ್ಯಾಪೀಠದ ಉದ್ಘಾಟನೆಯ ಕಾಲದಲ್ಲಿ ಅದರ ಕಾಲೇಜಿನ ಮುಖ್ಯೋಪಾಧ್ಯರ ಸ್ಥಳಕ್ಕೆ ಸದ್ಗುಣಿಯಾದ ಒಬ್ಬ ನಿರಕ್ಷರಕುಕ್ಷಿಯನ್ನು ತಾವಾಗಿದ್ದರೆ ನಿಯಮಿಸುತ್ತಿದ್ದೆವು ಎಂದುದುಂಟು. ಆದರೆ ದಿವಂಗತ ಆಚಾರ್ಯ ಎ. ಟಿ. ಗಿದ್ವಾನಿಯವರನ್ನು ಹುದ್ದೆಕಿ ಮುಖ್ಯೋಪಾಧ್ಯಯರನ್ನಾಗಿಯೂ ಉಪಕುಲಪತಿಗಳನ್ನಾಗಿಯೂ ಮಾಡಿದ್ದೂ ಅವರೇ; ಮತ್ತು ರಾಜಾಜಿಯನ್ನು ಗಾಂಧಿಯವರ ಸಂಪೂರ್ಣ ಒಪ್ಪಿಗೆಯಂತೆಯೇ ನಿಯಮಿಸಲಾಯಿತೆಂಬುದರ ಬಗ್ಗೆ ನನಗೆ ಎಳ್ಳಷ್ಟೂ ಸಂದೇಹವಿಲ್ಲ. ಆದುದರಿಂದ ಅವರ ಮಾತಿಗೆ ಅಕ್ಷರಾರ್ಥಕ್ಕಿಂತ ಉತ್ತಮವಾದ ಅರ್ಥವನ್ನು ಮಾಡಬೇಕಾಯಿತು. ಅವರು ಆದೇಶಪತ್ರ ಬರೆದಿಟ್ಟಿದ್ದರೆ, ಅದರ ಪ್ರಕಾರ ಅವರು ಜವಾಹರಲಾಲರಿಗೆ "ಭಾರತದ ಅಜ್ಞಾನಿಯೂ ದರಿದ್ರನೂ ಆದ ಒಕ್ಕಲಿಗನೇ ನಿಮ್ಮ ಯಜಮಾನ" ಎಂದೂ ರಾಜಾಜಿಗೆ "ಹರಿಜನರ ಹುಡುಗಿಯಷ್ಟು ನೀವು ದೈನ್ಯಭಾವದಿಂದ ಇರಬೇಕು" ಎಂದೂ ಆಚಾರ್ಯ ಗಿದ್ವಾನಿಯವರಿಗೆ "ನೀವು ಸದ್ಗುಣಿಗಳಾಗದಿದ್ದರೆ ನಿಮ್ಮ ವಿದ್ಯಾವಂತಿಕೆಯಿಂದೇನೂ ಪ್ರಯೋಜನವಿಲ್ಲ" ಎಂದೂ ಹೇಳುತ್ತಿದ್ದರೆನ್ನಬಹುದು. ಗಾಂಧೀಜಿ ಕಾಂಗ್ರೆಸ್ಸಿನಲ್ಲಿಯ ತಮ್ಮ ಸಹೋದ್ಯೋಗಿಗಳನ್ನು ಅಥವಾ ಧನಿಕರೊಡನೆ ತಾವಿಟ್ಟುಕೊಂಡ ಸಂಪರ್ಕವನ್ನು ಬಿಡಲಾರದ ದೌರ್ಬಲ್ಯವನ್ನು ತೋರಿದ್ದರೆಂದು ನಾವು ಭಾವಿಸಿದರೆ ಅವರು ಬದುಕಿದ್ದಾಗಲೇ ತತ್ಪಕ್ಕಾಗಿ ಅವರೊಡನೆ ಅಸಹಕಾರ ಮಾಡಲು ನಮಗೆ ಬೇಕಾದಷ್ಟು ಅವಕಾಶವಿತ್ತು. ತಮಗೆ ಇಷ್ಟು ಮಾಡಿದ ಮಾತ್ರಕ್ಕೆ ಅಸಹಾಯಶೂರತೆಯಿಂದ ತಮ್ಮ ಕೆಲಸವನ್ನು ತಾವು ಮಾಡಬಲ್ಲೆವೆಂದು ಅವರಿಗೆ ಆತ್ಮಪ್ರತ್ಯಯವಿದ್ದುದರಿಂದ ಗಾಂಧಿಯವರ ಸಹಕಾರ ಸರಿಯಾದದ್ದೆಂದು ನಮು ಗಣಿಸಿದರೆ, ಆಗ ಅವರಂತೆಯೇ ನಾವು ನಮ್ಮಲ್ಲಿಯೂ ಅಂಥ ಶಕ್ತಿಯನ್ನು ಬೆಳೆಸಿಕೊಳ್ಳೋಣ. ತಮ್ಮ ಮಾತು ಅನ್ಯರಲ್ಲಿ ವಿಶ್ವಾಸ ಹುಟ್ಟಿಸಲು ಅಸಮರ್ಥವಾದಾಗ ಗಾಂಧಿಯವರು ತಮ್ಮನ್ನೇ ತಾವು ದೂಷಿಸಿಕೊಂಡು ಅದು ವಿಶ್ವಾಸ ಹುಟ್ಟಿಸುವವರೆಗೆ ತಾಳ್ಮೆಯಿಂದ ಕಾದಿರುತ್ತಿದ್ದರು. ಅವರ ಸಹನೆಯೊಂದಲ್ಲದಿದ್ದರೆ ನಮ್ಮಲ್ಲಿ ಎಷ್ಟೋ ಜನರು ಗಾಂಧಿಯವರಿಂದ ಎಂದೋ ಮುಕ್ತ ಕಾರ್ಯರಾಗಿ ಪರಿತ್ಯಜಿಸಲ್ಪಡುತ್ತಿದ್ದೆವು. ರಚನಾತ್ಮಕ ಕಾರ್ಯವೊಂದೇ ದೇಶದ ಮೋಕ್ಷಮಾರ್ಗ ಮತ್ತು ಅದನ್ನು ಈಗಲಾಗಲಿ ಇನ್ನವಾಗಲಾದರೂ ಆಗಲಿ ತನ್ನ ಎಲ್ಲ ಧೋರಣಗಳ ಮೂಲಭೂತ ಅಧಾರವನ್ನಾಗಿ ಸರಕಾರ ತೆಗೆದುಕೊಳ್ಳಬೇಕು ಎಂಬುದನ್ನು ಶ್ರೀ ಕುಮಾರಪ್ಪನವರೊಡನೆ ನಾನೂ ನಂಬುತ್ತೇನೆ. ಇಂದು ಅದನ್ನು ಸರಿಯಾಗಿ ಅರಿತುಕೊಳ್ಳದವರಿಗೆ ಈ ನಂಬುಗೆಯನ್ನು ಶಪಥ ಹಾಕಿ ಪುನರುಚ್ಚಾರ ಮಾಡುವದರಿಂದ ವಿಶ್ವಾಸ ಹುಟ್ಟಿಸಲು ಬಾರದು. ಅದಿಲ್ಲದವರೊಡನೆಯೂ ನಾವು ಭರವಸೆ, ತಾಳ್ಮೆ ಮತ್ತು ಪ್ರೀತಿಗಳಿಂದ ಕೆಲಸ ಮಾಡಲು ಆ ಶ್ರದ್ಧೆಯಷ್ಟೇ ಸಾಕೆನಿಸಬೇಕು.

ವರ್ಧಾ
೨೨-೩ ೪೯

ಕಿ. ಘ. ಮಶ್ರುವಾಲಾ

**ಉತ್ತರಲೇಖ:** ಮುದ್ರಣಕ್ಕೆ ಕಳುಹುವ ಮುನ್ನ ಇದನ್ನು ಓದಿದ ನನ್ನೊಬ್ಬ ಸಹೋದ್ಯೋಗಿಗಳು ಆ ಕ್ಷಣ ಒಂದು ದಫ್ತರವನ್ನು ತೆಗೆದು ಶ್ರೀ ಜೆ. ಆರ್. ಡಿ. ತಾತಾ ಅವರಿಗೆ ಗಾಂಧೀಜಿ ಬರೆದ ಕಾಗದದ ಈ ಕೆಳಗಿನ ಪ್ರತಿಯನ್ನು ಕೈಗೆಕೊಟ್ಟರು. ಅದು ಕಸ್ತೂರಬಾ ಗಾಂಧೀಸ್ಮಾರಕ ವಿಶ್ವಸ್ತ ಸಮಿತಿಗೆ ಸಂಬಂಧಿಸಿದ್ದು. ಅದರಿಂದ ಗಾಂಧಿಯವರ ಮನೋವೃತ್ತಿ ಮತ್ತು ವಿಚಾರಸರಣಿಗಳು ತಿಳಿಯ ಬರುತ್ತವೆ.

ಸೇವಾಗ್ರಾಮ, ವರ್ಧಾಮೂಲಕ,
ಮಧ್ಯಪ್ರಾಂತ.
ಅಕ್ಟೋಬರ ೭, ೧೯೪೪

ಪ್ರಿಯ ಜಹಾಂಗೀರಜಿ,

ಗುಜರಾತಿಯಲ್ಲಿ ಬರೆಯುವುದು ನನಗೆ ಇಷ್ಟವಾದರೂ ನಿಮಗೆ ಅದಷ್ಟು ಚೆನ್ನಾಗಿಅರ್ಥವಾಗಲೆಂದು ಇದನ್ನು ನಾನು ನಿಮಗೆ ಇಂಗ್ಲೀಷಿನಲ್ಲಿ ಬರೆಯುತ್ತೇನೆ. ಅದೇ ಕಾರಣಕ್ಕಾಗಿ ಇದನ್ನು "ಟೈಪ್" ಮಾಡಲಾಗುತ್ತದೆ.

# ಅಂದಿನ ಮತ್ತು ಇಂದಿನ ರಾಜಕಾರಣ

(೬ನೇ ಪುಟದಿಂದ ಬಂದುದು)

ಕಾರ್ಯಕ್ಕೆ ಕೇಂದ್ರ ಸ್ಥಾನವನ್ನು ಕೊಡಬೇಕು. ಈಗಾಗಲೆ ಇರುವ ಮತ್ತು ಇನ್ನು ಮುಂದೆ ಸ್ಥಾಪಿತವಾಗಬಹುದಾದ ವಿವಿಧ ರಚನಾತ್ಮಕ ಸಂಸ್ಥೆಗಳು ಅದರಲ್ಲಿ ಅವಯವಗಳಂತೆ ಸಮಾವಿಷ್ಟವಾಗಿರಬೇಕು. ಕಾಂಗ್ರೆಸ್ಸು ವಿಕೇಂದ್ರೀಕೃತ ಉತ್ಪಾದನೆಯ ಯೋಜನೆಯನ್ನು ಸ್ವೀಕರಿಸಬೇಕು. ಅದು ರಾಷ್ಟ್ರದ ಶಾಶ್ವತ ಆರ್ಥಿಕ ಪ್ರಣಾಲಿಯಲ್ಲಿ ಅಂಗವಾಗಬೇಕು. ಅದು ಗೃಹ ಮತ್ತು ಚಿಕ್ಕ ಘಟ್ಟ ಉದ್ಯೋಗಗಳ ಶೀಘ್ರ ಬೆಳವಣಿಗೆಗೆ ವಿಶೇಷ ಲಕ್ಷ್ಯ ಕೊಟ್ಟು ರಾಷ್ಟ್ರೀಯ ಮತ್ತು ಪ್ರಾದೇಶಿಕ ಸ್ವಯಂಪೂರ್ಣತೆಯನ್ನೆ ಗುರಿಯಾಗಿಟ್ಟುಕೊಳ್ಳಬೇಕು." ಇದನ್ನು ಕೃತಿಯಲ್ಲಿಳಿಸುವದಕ್ಕೆ ಅವಶ್ಯವಾದ ಧೋರಣೆಯನ್ನೂ ಕಾರ್ಯಕ್ರಮವನ್ನೂ ಕಾಂಗ್ರೆಸ್ಸು ಕೈಕೊಂಡರೆ ರಚನಾತ್ಮಕ ಕಾರ್ಯಕರ್ತರು ಕರೆಯದೆನೇ ಸಹಕರಿಸಲು ಮುಂದೆ ಬರುವರು. ತಮ್ಮ ಧ್ಯೇಯಗಳು ಕಾಂಗ್ರೆಸ್ಸಿನ ಮೂಲಕ ಮಾತ್ರ ಸಾಧ್ಯವಾಗಬಲ್ಲವೆಂದರಿತು ಆಗ ಅವರು ಅದರಲ್ಲಿ ಗುಂಪುಗುಂಪಾಗಿ ಬಂದು ನೆರೆಯುವರು. ಕಾಂಗ್ರೆಸ್ಸು ತನ್ನ ಅಧಿಕಾರದ ರಾಜಕಾರಣವನ್ನು ರಾಮರಾಜ್ಯದ ರಾಜಕಾರಣವಾಗಿ ಮಾರ್ಪಡಿಸಲು ಸಿದ್ಧವಾಗಿದೆಯೆ?

ಬ್ರಿಟಿಶ ಸಾಮ್ರಾಜ್ಯವಾದದೊಡನೆ ಹೋರಾಡಲು ರಾಜಕೀಯ ಗತ್ತುಗಾರಿಕೆ ಬೇಕಾಗಿತ್ತು. ಆದರೆ ಸಾಮಾಜಿಕ ಅನ್ಯಾಯ, ಬಡತನ, ರೋಗರುಜಿಗಳೆಂಬ ರಕ್ಕಸರನ್ನು ತಡವಲು ಸಹನಶೀಲತೆಯನ್ನೂ ಅಚಲ ನಿರ್ಧಾರವನ್ನೂ ದೃಢ ನಿಷ್ಠೆಯನ್ನೂ ಒಳಗೊಂಡ ಮೇಲ್ತರದ ರಚನಾತ್ಮಕ ಕಾರ್ಯ ಬೇಕಾಗಿದೆ. ಅದಕ್ಕೆ ನಿಶ್ಚಿತವಾದ ಸರಕಾರಿ ಧೋರಣೆ ಮತ್ತು ಪ್ರೇರಣೆಗಳ ಶಕ್ತಿಯೂ ಬೇಕು.

ಆದುದರಿಂದ ರಾಮರಾಜ್ಯ ರಾಜಕಾರಣವನ್ನು ಸ್ವೀಕರಿಸಬೇಕಾದರೆ ನಮ್ಮ ಒರೆಗಲ್ಲೇ ಬದಲಾಗಬೇಕು. ಭೌತಿಕ ವಿಚಾರಗಳನ್ನು ತಳ್ಳಿ ಅದರ ಸ್ಥಾನದಲ್ಲಿ ನೈತಿಕ, ಮಾನವೀ ಮತ್ತು ಆಧ್ಯಾತ್ಮಿಕ ವಿಚಾರಗಳನ್ನು ಸ್ಥಾಪಿಸಬೇಕು. ಇದು ನಮ್ಮ ಸರಳ ಜೀವನ ರೀತಿಯಲ್ಲಿ ಪ್ರತಿಬಿಂಬಿಸಿರಬೇಕು. ಈ ಸಾಮಾಜಿಕ ಪದ್ಧತಿ ದಿಂಗತದಲ್ಲಾದರೂ ಕಾಣಿಸಿದ ಹೊರತು ರಚನಾತ್ಮಕ ಕಾರ್ಯಕರ್ತರನ್ನು ಯಾವ ಬಗೆಯ "ಬೇಡ್ನಾ"(ಆನೆ ಹಿಡಿಯುವ ಬೋನು) ಯುಕ್ತಿಯಿಂದಲೂ ಹಳೆಗಾಲದ ರಾಜಕಾರಣದಲ್ಲಿ ಕೆಡಹುವದು ಸಾಧ್ಯವಿಲ್ಲ. ಅವರನ್ನು ಅದರೊಳಗೆ ಆಕರ್ಷಿಸಬೇಕಲ್ಲದೆ ಮಾತುಗಳ ಡೊಂಬರಾಟದಿಂದ ಅಟ್ಟಿಕೊಂಡು ಬರಲಾಸಲ್ಲ. ಕೈಮೀರುವ ಮೊದಲೇ ಮುಂದಾಳುಗಳಿಗೆ ಜ್ಞಾನೋದಯವಾಗಲೆಂದು ಪ್ರಾರ್ಥಿಸೋಣ.

—ಜೆ. ಸಿ. ಕುಮಾರಪ್ಪ

---

ನಿಮ್ಮ ಸಾದರಾಭಿನಂದನೆಯ ಪತ್ರಕ್ಕಾಗಿ ನಾನು ನಿಮಗೆ ಕೃತಜ್ಞ. ವರ್ಧಾದಲ್ಲಿ ನಾಳಿನ ನವೆಂಬರ ನಾಲ್ಕರ ಶನಿವಾರ ನಡೆಯಲಿರುವ ವಿಶ್ವಸ್ತರ ಮುಂದಿನ ಸಭೆಗೆ ಬರುವುದರ ಮೂಲಕ ನೀವು ನಿಮ್ಮ ಆದರವನ್ನು ಕಾರ್ಯರೂಪಕ್ಕೆ ತರಬೇಕೆಂದು ನಾನು ಬಯಸುತ್ತೇನೆ. ಮೂಲ ವಿಶ್ವಸ್ತರಿಗೆ ಹೆಚ್ಚು ಅನಾನುಕೂಲವಾಗಬಾರದೆಂದು ಶನಿವಾರವನ್ನು ವಿಶೇಷತಃ ಆರಿಸಲಾಗಿದೆ. ನಾನು ವಿಶ್ವಸ್ತಸಂಘಕ್ಕೂ ಚಿಕ್ಕ ಕಾರ್ಯಕಾರಿ ಸಮಿತಿಗೂ ಸೂಚಿಸಿದ ಹೆಚ್ಚಿನ ಹೆಸರುಗಳನ್ನು ನೀವು ಆ ಕ್ಷಣ ಒಪ್ಪಿಕೊಂಡದ್ದು ಮೂಲ ವಿಶ್ವಸ್ತರು ನಿಷ್ಕ್ರಿಯ ಸದಸ್ಯರಾಗಬಹುದೆಂಬ ಅರ್ಥವನ್ನು ಕೊಡುವಂತಾಗಬಾರದು.

ವ್ಯವಹಾರದಲ್ಲಿ ವಿಶ್ವಸ್ತನಿಧಿಯ ಆಡಳಿತೆಯನ್ನು ನನ್ನ ಆಯ್ಕೆಯ ವಿಶ್ವಸ್ತರ ಕೈಯಲ್ಲೇ ಉಳಿಯಬೇಕೆಂಬ ವಿಚಾರಕ್ಕೆ ಪ್ರಸಾರಾವಕಾಶವನ್ನು ನಾನು ಕೊಟ್ಟಿದ್ದು ತಪ್ಪೆಂಬುದು ನನಗೆ ಗೊತ್ತು. ಏನಾದರೂ ಆ ಕಾರ್ಯ ನಡೆಯುವ ಮೊದಲೇ ನಾನದನ್ನು ಕಂಡು ಹಿಡಿದೆ. ಅಂಥ ಕಲ್ಪನೆ ಬಹಳ ಸಂಕುಚಿತವೆಂಬುದು ಹೆಚ್ಚು ಹೆಚ್ಚು ವಿಚಾರಿಸಿದ ಹಾಗೆಲ್ಲ ತೋರಿಬರುತ್ತದೆ. ಇದೀ ಸಂಘವೇ ಒಂದು ಯೋಗ್ಯ ಸಂಯೋಗವಾಗಿದೆ ಮತ್ತು ಹಲವಾರು ವಿಶ್ವಸ್ತರು ನಿಧಿಯ ಆಡಳಿತೆಯಲ್ಲಿ ಜೀವಂತ ಆಸಕ್ತಿಯನ್ನು ವಹಿಸಿದರೆ, ಅನಿರೀಕ್ಷಿತ ಲಾಭವನ್ನು ಕೂಡ ನಾವು ನಿರೀಕ್ಷಿಸಬಹುದು. ಉಚ್ಚ ಶಿಕ್ಷಿತ ನಗರಸ್ಥರು ಮತ್ತು ಸರಳರಾದ ಗ್ರಾಮೋನ್ಮುಖಿ ತಿಗಳಿನ...

—೧೧ನೆಯ ಪುಟಕ್ಕೆ

# ಸ್ಟೇಶನುಗಳಲ್ಲಿ ಆಹಾರ ಪದಾರ್ಥಗಳ ಮಾರಾಟ

ದೇಶದಲ್ಲಿ ಆಹಾರದ ಕೊರತೆಯಿದೆ. ಅನುಚಿತ ಆಹಾರ ಸೇವನೆಯ ಅಭ್ಯಾಸದಿಂದ ಅನಾರೋಗ್ಯ ಹೆಚ್ಚುತಿದೆ. ರೇಲ್ವೆ ಪ್ಲ್ಯಾಟಫಾರ್ಮಗಳಲ್ಲಿ ಆಹಾರ ಪದಾರ್ಥಗಳ ಮಾರಾಟವನ್ನು ಮಿತಗೊಳಿಸುವದರಿಂದ ಇವೆರಡನ್ನು ತಡೆಯಬಹುದು. ಇದೀಗ ಇಪ್ಪತ್ನಾಲ್ಕು ಗಂಟೆ ಪ್ರತಿಯೊಂದು ಸ್ಟೇಶನದಲ್ಲಿ ಮಾರಾಟಗಾರರು ತಮ್ಮ ಪದಾರ್ಥಗಳ ಮಾರಾಟಕ್ಕಾಗಿ ಕೂಗುತ್ತಾರೆ ಎಲ್ಲ ಸಮಯದಲ್ಲಿ ತಿನ್ನುವದು ಆರೋಗ್ಯದೃಷ್ಟಿಯಿಂದ ಕೆಟ್ಟ. ಗಾಡಿಬಂದ ಸಮಯದಲ್ಲೆಲ್ಲ ಸ್ಟೇಶನ ಪ್ಲ್ಯಾಟಫಾರ್ಮ ಅಸ್ವಚ್ಛ ಮತ್ತು ಗದ್ದಲದ ಪೇಟೆಯಾಗಿ ಪರಿಣಮಿಸುತ್ತದೆ.

ಆಹಾರ ಪದಾರ್ಥಗಳ ಈ ಮಾರಾಟವನ್ನು ನಿಯಂತ್ರಿಸಿ ಕೆಲ ಗಂಟೆಗಳಿಗೆ ಮಾತ್ರ ಇದನ್ನು ಮಿತಗೊಳಿಸುವದು ಸುಲಭವಾಗಿದೆ. ಆ ಸಮಯದಲ್ಲಿ ಆಯಾ ವಿಶಿಷ್ಟ ಸ್ಟೇಶನಗಳಲ್ಲಿ ಗಾಡಿಗಳನ್ನು ಹೆಚ್ಚು ಅವಧಿಯವರೆಗೆ ನಿಲ್ಲಿಸಲು ಅನುಕೂಲವಾಗುವದು.

ಇದರಿಂದ ಆರೋಗ್ಯ ಸುಧಾರಣೆಯಾಗುವದು. ಪ್ಲ್ಯಾಟಫಾರ್ಮಗಳಲ್ಲಿ ಮತ್ತು ಡಬ್ಬಿಗಳಲ್ಲಿ ಸ್ವಚ್ಛತೆಯುಳಿಯುವದು ಮತ್ತು ಸಾಮಾನ್ಯವಾಗಿ ಎಲ್ಲವೂ ಅಚ್ಚುಕಟ್ಟಿನಿಂದ ನಡೆಯುವದು ತಾವು ಮಾಡಬೇಕೆಂದಿರುವ ಅನೇಕ ಸುಧಾರಣೆಗಳಲ್ಲಿ ರೇಲ್ವೆ ಖಾತೆಯವರು ಈ ಸುಧಾರಣೆಯತ್ತ ಕೂಡ ಗಮನಿಸುವರೋ?

ಜೆ. ಸಿ. ಕು.

ಈ ವಿಷಯದ ಬಗ್ಗೆ ವಿಚಾರಮಾಡಿ ಸುಧಾರಣೆ ಮಾಡುವ ಹೊಣೆ ಪ್ರವಾಸಿಕರ ಮೇಲೆಯೂ ಇದೆ. ಕೆಲವರಿಗೆ ಬುಗಿಬಂಡಿ ಹತ್ತಿದ ಕೂಡಲೆ ಕೂಳಬಕ್ಕರಂತೆ ವಿಪರೀತ ಹಸಿವಾದಂತೆ ತೋರುವದು ಅವಿಶ್ರಾಂತ ಮೇಯುವವರಂತೆ ಈ ಜನರು ಪ್ರವಾಸಮಾಡುವಾಗ ಹಗಲು ರಾತ್ರಿಯೆನ್ನದೆ ಯಾವಾಗಲೂ ತಿನ್ನುವದು ಮತ್ತು ಕುಡಿಯುವದು ಇದು ಕೆಟ್ಟ ಮತ್ತು ಅನಾರೋಗ್ಯಕರ ಚಟ. ಜನತೆ ಸಹಾಯ ಸಲ್ಲಿಸದಿದ್ದರೆ ಯಾವ ವ್ಯವಸ್ಥಾಪಕ ಖಾತೆಯಿಂದಲೂ ಸ್ವಚ್ಛತೆಯನ್ನು ಕಾಯುವದು ಶಕ್ಯವಾಗಲಾರದು. ನಮ್ಮ ಪ್ಲ್ಯಾಟಫಾರ್ಮ ಮತ್ತು ಬಂಡಿಗಳಲ್ಲಿ (ನಗರಗಳಲ್ಲಿ) ಕೂಡ ಅಸ್ವಚ್ಛತೆಗೆ ರೇಲ್ವೆ ಇಲ್ಲವೆ ಮುನಸಿಪಾಲಿಟಿಯವರಿಗಿಂತ ಜನತೆಯೇ ಹೆಚ್ಚು ದೋಷಾರ್ಹರಾಗಿರುವದು.

ಕಿ. ಘ. ಮ.

---

# ರಾಷ್ಟ್ರೀಯ ಸಪ್ತಾಹ

ರಾಷ್ಟ್ರೀಯ ಸಪ್ತಾಹ ಪ್ರಾರಂಭಕ್ಕಿಂತ ಎರಡು ದಿನ ಮೊದಲು ಈ ಸಂಚಿಕೆ ಹೊರಬೀಳುವದು. ಈ ಸಪ್ತಾಹವನ್ನು ಹೇಗೆ ಆಚರಿಸಬೇಕೆಂಬ ಬಗೆಗೆ ಕಾಂಗ್ರೆಸ ಧುರೀಣರು ಪ್ರಕಟನೆ ಹೊರಡಿಸಿರಬಹುದೆಂದು ನಾನು ಭಾವಿಸುತ್ತೇನೆ. ನಮ್ಮ ರಾಷ್ಟ್ರೀಯ ಜೀವನದ ಇಂದಿನ ಪರಿಸ್ಥಿತಿಯಲ್ಲಿ ಹರಿಜನ ಪ್ರಶ್ನೆಗೇ ಪ್ರಥಮ ಪ್ರಾಶಸ್ತ್ಯ ಸಿಕ್ಕತಕ್ಕದ್ದೆಂದು ನನಗೆನಿಸುತ್ತದೆ. ಹರಿಜನರ ಪರವಾಗಿ ಕಾಯಿದೆ ಪಾಸಾಗಿದ್ದರೂ ಅವರ ಸಾಮಾಜಿಕ ಅಸ್ಪೃಶ್ಯತೆಯು ಮೊದಲಿನಷ್ಟೇ ಘೋರ ಸ್ವರೂಪವನ್ನು ತಾಳಿದೆ. ನಿಜವಾಗಿ ಅಸ್ಪೃಶ್ಯತೆಯನ್ನು ಹರಿದೊಗೆದವರು ಬೆರಳಿನಿಂದ ಎಣಿಸುವಷ್ಟು ಜನ ಮಾತ್ರ. ಅವರ ಆ ಸಾಮಾಜಿಕ ಬಹಿಷ್ಕಾರದ ಮೂಲಕ ಅವರಿಗೆ ನೀಡು ಸಿಕ್ಕಲು, ಶಾಲೆಗಳಲ್ಲಿ ಮತ್ತು ವ್ಯಕ್ತಿಗಳಲ್ಲಿ ಪ್ರವೇಶ ಸಿಕ್ಕಲು ಮತ್ತು ಮಂದಿರಗಳಲ್ಲಿ ಪ್ರವೇಶ ಸಿಕ್ಕಲು ಬಹಳ ತೊಂದರೆ ಹೋಗಬೇಕಿದೆ.

ಶ್ರೀ ರಾಮುಲು ಇದರ ಉಪವಾಸದ ಪರಿಣಾಮವಾಗಿ ಮದ್ರಾಸ ಸರಕಾರದವರು ತಿಂಗಳಿಗೊಂದು ದಿನ ಹರಿಜನ ದಿನವೆಂದು ಆಚರಿಸಲಾಗುವದೆಂದು ಕೆಲ ದಿನಗಳ ಹಿಂದೆ ಸಾರಿದ್ದರು. ಮುಂಬಯಿ ರಾಷ್ಟ್ರದಲ್ಲಿ ಹರಿಜನ ಸೇವಕ ಸಂಘದ ಅಧ್ಯಕ್ಷ ಶ್ರೀ ವಿ. ಎಸ್. ಭಾವೆಯವರು ಎಲ್ಲ ಜಾತಿಯ ಸ್ತ್ರೀ ಪುರುಷರು ಕೂಡಿ ಜನರಗೂಡ ಕಲಸಿಕೊಂಡು ಮತ್ತು ಊಟ ಕೂಟಗಳನ್ನು ಸ್ವಚ್ಛ ಮಾಡುವ ಕಾರ್ಯಕ್ರಮವನ್ನು ಸಂಘಟಿಸಿದ್ದರು. ಯೋಗ್ಯ ದಿಶೆಯ ಕ್ರಿಯೆ ಹೆಚ್ಚಿಗಲಿ. ಇಂಥ ಚಟುವಟಿಕೆಗಳನ್ನು ಪ್ರಾರಂಭಿಸಲು ರಾಷ್ಟ್ರೀಯ ಸಪ್ತಾಹವು ಉಚಿತವಾದ ಪ್ರಸಂಗವು.

ವರ್ಧಾ
೨೭-೩ ೪೯

ಕಿ. ಘ. ಮ.

## ನಮ್ಮ ರಾಷ್ಟ್ರಭಾಷೆಯ ಸಮಸ್ಯೆ

(೪ನೆಯ ಪುಟದಿಂದ ಬಂದುದು)

ಮಾತುಗಳನ್ನು ಹೇಳುವದು ಅವಶ್ಯವಾಗಿದೆ. ನನ್ನ ಅಭಿಪ್ರಾಯದಲ್ಲಿ, ನಾಗರಿಲಿಪಿಯಲ್ಲಿ ಕೆಲಸುಧಾರಣೆಗಳನ್ನು ಮಾಡಬೇಕಾಗಿದೆ. ಅವಷ್ಟು ಸುಧಾರಣೆಗಳಾಗುವ ವರೆಗೆ ಅದರ ಬಳಕೆಯೇ ಬೇಡವೆಂದು ನನ್ನ ಹೇಳಿಕೆಯಲ್ಲ. ಅದು ಈಗಿದ್ದಂತೆಯೇ ಸಾಗಬಹುದು; ಆದರೆ ಶಾಸ್ತ್ರೀಯ ದೃಷ್ಟಿಯಿಂದ ಅದನ್ನು ಸುಧಾರಿಸುವದು ಅಗತ್ಯವಾಗಿದೆ. ಅನೇಕರು ಲಿಪಿ ಸುಧಾರಣೆಯನ್ನು ಅಪೇಕ್ಷಿಸುತ್ತಾರೆ. ಆದರೆ ಅವರು ಟೈಪರೈಟಿಂಗ್ ಯಂತ್ರದ ದೃಷ್ಟಿಯಿಂದ ಮಾತಾಡುತ್ತಾರೆ. ನನ್ನ ಪಾಲಿಗೆ ಯಾಂತ್ರಿಕ ಸೌಕರ್ಯ ಸಣ್ಣ ಸಂಗತಿ. ನಾನು ಜ್ಞಾನದ ದೃಷ್ಟಿಯಿಂದ ಸುಧಾರಣೆಗಳು ಬೇಕೆನ್ನುತ್ತೇನೆ. ಯಂತ್ರದ ಸೌಕರ್ಯಕ್ಕಾಗಿ ಲಿಪಿಯನ್ನು ಕೆಡಿಸುವುದೂ ಹಾಸಿಗೆಯ ಉದ್ದಕ್ಕೆ ಸರಿಯಾಗಿ ಕಾಲನ್ನು ಕಡಿಯುವುದೂ ಒಂದೇ. ನಿಮ್ಮ ಉದ್ದಕ್ಕೆ ಸರಿಯಾಗಿ ಹಾಸಿಗೆ ಹೊಲಿಸಬೇಕಲ್ಲವೆ? ಆದರೆ ಶಾಸ್ತ್ರೀಯ ದೃಷ್ಟಿಯಿಂದ ಒಂದು ಲಿಪಿ ಸದೋಷವಾಗಿದ್ದರೆ ಅದನ್ನು ಅವಶ್ಯವಾಗಿ ತಿದ್ದಬೇಕು. ನನಗೆ ಬೇಕೆನಿಸುವ ನಾಗರಿಲಿಪಿಸುಧಾರಣೆಯ ವಿವರಗಳನ್ನು "ಲೋಕ ನಾಗರಿಲಿಪಿ" ಎಂಬ ಮರಾಠಿ ಪುಸ್ತಿಕೆಯಲ್ಲಿ ಪ್ರಕಟಿಸಿದ್ದೇನೆ. ಅವುಗಳ ವಿವರವನ್ನೆಲ್ಲ ಇಲ್ಲಿ ನಿಮಗೆ ಹೇಳುತ್ತ ಕೂರುವದಿಲ್ಲ. ಅದು ನಮ್ಮ ಪ್ರಕೃತ ವಿಷಯವಲ್ಲ. ಆದರೆ ಮೂಲಭೂತ ಸುಧಾರಣೆಯೊಂದು ನಾನು ಬಗೆದಿರುವದನ್ನಷ್ಟೆ ಇಲ್ಲಿ ನಿಮ್ಮ ಮುಂದಿಡುವೆ.

ನಾಗರಿಯಲ್ಲಿಯೂ ಇತರ ಭಾರತೀಯ ಲಿಪಿಗಳಲ್ಲಿಯೂ ಸಂಯುಕ್ತಾಕ್ಷರಗಳನ್ನು ಬರೆಯುವ ಈತನ ಪದ್ಧತಿ ಅಶಾಸ್ತ್ರೀಯವಾಗಿದೆ. ಬೇರೆ ಬೇರೆ ಲಿಪಿಗಳನ್ನು ಅಭ್ಯಸಿಸಿದ ಮೇಲೆ ನನಗೆ ಈ ಮಾತು ಇನ್ನಷ್ಟು ಖಚಿತವಾಯಿತು. ಕನ್ನಡ ನಾಗರಿಲಿಪಿಯಲ್ಲಿ ಶಬ್ದಗಳನ್ನು ಒಡೆಯುವ ಪದ್ಧತಿ ತಪ್ಪಾಗಿದೆ. ಇಂಗ್ಲೀಷಿನಲ್ಲಿ "Godown" (ಗೋಡೌನ್) ಎಂಬ ಶಬ್ದವನ್ನು (God-own) (ಗಾಡ್-ಓನ್) ಎಂದು ವಿಂಗಡಿಸಿದರೆ ಅದು ಹಾಸ್ಯಾಸ್ಪದವಾದೀತು. ಅದೇ ಪ್ರಕಾರ ಕೃಷ್ಣ ಎಂಬ ಸಂಯುಕ್ತ ಪದವನ್ನು ಕೃ ಮತ್ತು ಷ್ಣ ಎಂದು ಒಡೆಯುವದೂ ಹಾಸ್ಯಾಸ್ಪದವೇ ಸರಿ. ನಿಜವಾಗಿ ಕೃಷ್ ಮತ್ತು ಣ ಎಂಬ ಎರಡು ಬೇರೆ ಬೇರೆ ಅವಯವಗಳು ಸೇರಿ ಕೃಷ್ಣ ಎಂದಾಗಿದೆ. ಕೃಷ್ ಎಂಬದು ಮೂಲಧಾತು, ಣ ಎಂಬದು ಪ್ರತ್ಯಯ. ಕೃಷ್ ಎಂದರೆ ಹೂಡು, ಉಳು ಎಂದರ್ಥ. ಅದ್ದರಿಂದ ಕೃಷ್ಣ ಎಂದರೆ "ಬೇಸಾಯ ಮಾಡುವವ" ಎಂದು ತಾತ್ಪರ್ಯ. ಬಿಸಿಲಲ್ಲಿ ದುಡಿಯುವ ಒಕ್ಕಲಿಗನು ಕಪ್ಪಾಗುವದರಿಂದ ಕೃಷ್ಣ ಶಬ್ದಕ್ಕೆ ಕಪ್ಪೆಂಬ ಅರ್ಥ ಬಂದಿರಬೇಕು. ಅದೇ ಪ್ರಕಾರ ಪತ್ರ ಎಂಬ ಶಬ್ದದ ಎರಡಕ್ಷರಗಳನ್ನು ಪ—ತ್ರ ಎಂದು ಬೇರ್ಪಡಿಸಿದರೆ ಅದೂ ತಪ್ಪೇ. ಅದನ್ನು ಪತ್—ರ ಎಂದು ಒಡೆಯುವದೇ ಉಚಿತ. ಪತ್— ಎಂದರೆ ಬೀಳುವದು. ಗಿಡದಿಂದ ಬಿದ್ದ ವಸ್ತು, ಎಂದರೆ ಎಲೆಯೆಂಬ ಅರ್ಥವನ್ನು ಆ ಶಬ್ದ ರೂಢಿಸಿಕೊಂಡಿತು. ಉ—ದ್ಯಾ—ನ ಎಂದು ತಪ್ಪಾಗಿ ಒಡೆಯುತ್ತೇವೆ. ಸರಿಯಾದ ಒಡೆತವೆಂದರೆ ಉದ್—ಯಾ—ನ ಎಂಬದು ಉದ್ ಎಂಬ ಉಪಸರ್ಗಕ್ಕೆ ಮೇಲೆ ಎಂಬ ಅರ್ಥ, ಯಾ ಎಂದರೆ ಹೋಗು, ನ ಎಂಬದು ಪ್ರತ್ಯಯ. ಇಡಿ ಶಬ್ದಕ್ಕೆ ಮೇಲೆ ಹೋಗುವದು ಎಂದರ್ಥವಾಗುವದು. ನಗರಕ್ಕೆ ಶುದ್ಧವಾದ ಗಾಳಿ ದೊರಕಬೇಕಾದರೆ ಅದರ ಹೂದೋಟ ನಗರದ ಮಟ್ಟಕ್ಕಿಂತ ಮೇಲೆ, ಅಥವಾ ಎತ್ತರದಾಗಿರಬೇಕು. ಹೀಗೆ ಉದ್ಯಾನ ಶಬ್ದ ಎತ್ತರದಾದ ಹೂದೋಟವೆಂಬ ಅರ್ಥವನ್ನು ಪಡೆಯಿತು. ಇಂದು ಅದು ಸಾಮಾನ್ಯವಾಗಿ ಎಲ್ಲ ತೋಟಗಳಿಗೂ ಉಪಯೋಗಿಸಲ್ಪಡುತ್ತದೆ.

ಇಂದು ಪ್ರಚಲಿತವಾಗಿರುವ ಲೇಖನ ಪದ್ಧತಿಯಲ್ಲಿ ಸಂಯುಕ್ತಾಕ್ಷರಗಳನ್ನು ಬರೆಯುವ ರೀತಿ ಶಬ್ದದ ಅರ್ಥ ತಿಳಿಸಲು ಸಹಾಯಕವಾಗುವದಿಲ್ಲ. ಆದಕಾರಣ, ಎಲ್ಲ ಸಂಯುಕ್ತ ವ್ಯಂಜನಗಳನ್ನು ಹಲಂತ (್) ಸಂಜ್ಞೆಯ ಸಹಾಯದಿಂದ ಬರೆಯಬೇಕೆಂದು ನನ್ನ ಸೂಚನೆ. ಇದರಿಂದ ನಾಗರಿಯೂ ಇತರ ಲಿಪಿಗಳೂ ಶಾಸ್ತ್ರೀಯ ಮತ್ತು ಸರಳವಾಗುವವು. ಬಂಗಾಲಿ ಲಿಪಿಯಲ್ಲಿಯ ಸಂಯುಕ್ತ ವ್ಯಂಜನಗಳು ಎಲ್ಲಕ್ಕೂ ಜಟಿಲ. ಕನ್ನಡದಲ್ಲಿಯೂ ಅಂಥ ತೊಂದರೆಗಳು ಅನುಭವಕ್ಕೆ ಬರುತ್ತವೆ. ಇಂದು ನಡೆಯುತ್ತಿರುವ ಪದ್ಧತಿಯಲ್ಲಿ ಮಕ್ಕಳಿಗೆ ಎಲ್ಲ ಸಂಯುಕ್ತಾಕ್ಷರಗಳನ್ನು ಕಲಿತುಕೊಳ್ಳಲು ಮೂರು ವರುಷಗಳು ಬೇಕಾಗುವವು. ಶಿಕ್ಷಣದ ಪ್ರಥಮವರ್ಷದಲ್ಲಿ ಅವರು ಕೇವಲ ಸರಳಾಕ್ಷರಗಳನ್ನು ಕಲಿಯುವರು; ಎರಡನೆ ವರ್ಷದಲ್ಲಿ ಸರಳ ಸಂಯುಕ್ತಾಕ್ಷರಗಳನ್ನು ಕಲಿತು ಮೂರನೆ ವರ್ಷದಲ್ಲಿ ಉಳಿದವುಗಳನ್ನು ಅರಿತುಕೊಳ್ಳುವರು. ಈ ಕಷ್ಟಗಳನ್ನು ನೋಡುವಾಗ ಇಂಥ ಲಿಪಿಗಳನ್ನು ಬಳಕೆಗೆತಂದ ಪಂಡಿತರು ಮಕ್ಕಳ ಹಿತಕ್ಕೆ ಕ್ರೂರ ಶತ್ರುಗಳಾಗಿದ್ದರೋ ಏನೋ ಎಂದು ಸಂಶಯವುಂಟಾಗುತ್ತದೆ. ಸಾಕ್ಷರತೆಯ ಪ್ರಚಾರದಲ್ಲಿ ತೊಡಗಿದವರಿಗೆ ಈ ಸಂಯುಕ್ತಾಕ್ಷರಗಳನ್ನು ಕಲಿಸುವ ಕಷ್ಟವೂ ಅದಕ್ಕೆ ವೆಚ್ಚವಾಗುವ ಸಮಯವೂ ಚನ್ನಾಗಿ ಗೊತ್ತು. ಹಲಂತ ಸಂಜ್ಞೆಯನ್ನುಪಯೋಗಿಸಿದರೆ ಮಕ್ಕಳ ಸಮಯವನ್ನೆಷ್ಟೋ ಉಳಿಸಬಹುದು. ಅವರು ಈ ಸುಧಾರಣೆಗಳನ್ನು ಮಾಡಿಕೊಂಡರೆ ನಿರಕ್ಷರಗಳಿಗೆ ಸಂಯುಕ್ತಾಕ್ಷರಗಳನ್ನು ಕಲಿಸುವದು ಎಷ್ಟು ಸುಲಭವೆಂದು ಅವರಿಗೆ ಮನವರಿಕೆಯಾದೀತು. ಇದನ್ನು ನಾನು ಅಧಿಕಾರವಾಣಿಯಿಂದ ಹೇಳಬಲ್ಲೆ, ಏಕೆಂದರೆ, ವಿದ್ಯಾರ್ಥಿಗಳಿಗೆ ಕಲಿಸುವಾಗ ನಾನು ಈ ಮಾತನ್ನು ಸ್ವಾನುಭವದಿಂದ ಕಂಡುಕೊಂಡಿದ್ದೇನೆ. ಈ ಸುಧಾರಣೆಯಿಂದ ಸಮಯ ಉಳಿಯುವದಲ್ಲದೆ ವಿದ್ಯಾರ್ಥಿಗಳ ಜ್ಞಾನಕ್ಷೇತ್ರವನ್ನೂ ವಿಸ್ತರಿಸಬಹುದು. ನಾನು ಇತರ ಸುಧಾರಣೆಗಳನ್ನೂ ಸೂಚಿಸಿದ್ದೇನೆ. ಆದರೆ ಅವನ್ನೆಲ್ಲ ವಿವರಿಸುತ್ತ ಹೊತ್ತು ಕಳೆಯುವ ಬಯಕೆ ನನಗಿಲ್ಲ.

ಲಂಡನ್ ಪತ್ರ (ಸ್ವಂತ ಪ್ರತಿನಿಧಿಯಿಂದ)

## ಅಟ್ಲಾಂಟಿಕ್ ಒಪ್ಪಂದವೂ ರಾಜಕಾರಣಿಗಳೂ

ಮಾರ್ಚ ೨೪

ಉತ್ತರ ಅಟ್ಲಾಂಟಿಕ್ ಒಪ್ಪಂದದ ವಿವರಗಳು ಪ್ರಕಟವಾದುದೇ ಈ ವಾರದ ಅತಿ ದೊಡ್ಡ ಸುದ್ದಿ. ಅದರಿಂದ ೩೦ ಕೋಟಿ ಜನರಿಗೆ ಪರಾಕ್ರಮಣದಿಂದ ತಲೆಯುಳಿಸಿಕೊಳ್ಳಲು ಒಂದು ರಕ್ಷಣಾದುರ್ಗ ದೊರೆತಂತಾಯಿತು. ಮುಖ್ಯ ವಿಭಾಗದ ೫ ನೆಯ ಪ್ರಕರಣದಲ್ಲಿ ಸದಸ್ಯರಾಷ್ಟ್ರಗಳಲ್ಲಿ ಯಾವುದಾದರೊಂದು ಸಶಸ್ತ್ರ ದಾಳಿಗೆ ಗುರಿಯಾದರೆ ಅವೆಲ್ಲವೂ ಅವಶ್ಯವಿದ್ದರೆ ಅದಕ್ಕೆ ಸರ್ವ ಸಹಾಯವನ್ನೂ ನೀಡಬೇಕು ಎಂದು ಒಪ್ಪಂದ ವಚನಬದ್ಧವಾಗಿದೆ. ರಾಜತಂತ್ರಜ್ಞರಲ್ಲಿ ಕೆಲವರ ಪ್ರಕಾರ ಸಂಯುಕ್ತ ರಾಷ್ಟ್ರ ಸಂಘ ಸ್ಥಾಪಿತವಾದ ಮೇಲೆ ಅಂತಾರಾಷ್ಟ್ರೀಯ ರಾಜಕಾರಣದಲ್ಲಿ ನಡೆದ ಸಂಗತಿಗಳಲ್ಲಿ ಇದು ಬಹಳ ದೊಡ್ಡದೆನಿಸುತ್ತದೆ. ಇವರಲ್ಲಿ ಮತ್ತೆ ಕೆಲವರು ಇದರ ಮತ್ತು ಕಾಲಕ್ರಮೇಣ ಪಾಶ್ಚಾತ್ಯ ರಾಷ್ಟ್ರಗಳು ಹೊರಟ ಹೊಸ ಧೋರಣ ಮಾರ್ಗದಿಂದ ಉದ್ಭವಿಸುವ ಇಂತಹ ಇನ್ನಿತರ ಸಂರಕ್ಷಣಾ ಸಂಧಿಗಳ ದೆಸೆಯಿಂದ ಸಂ. ರಾ. ಸಂಘಕ್ಕೆ ಸಂಪೂರ್ಣವಾಗಿ ಗ್ರಹಣ ಹಿಡಿದು ಹೋಗಬಹುದು ಎನ್ನುತ್ತಾರೆ.

### ಒಪ್ಪಂದದ ಪರಿಣಾಮ

ಅಂತಾರಾಷ್ಟ್ರೀಯ ರಾಜಕಾರಣಿಗಳು ಅನುಸರಿಸಿದ "ಹೊಸ ಧೋರಣ ಮಾರ್ಗ" ವನ್ನು ಪರಿಶೀಲಿಸುವುದು ಕುತೂಹಲಜನಕವಾಗಿದೆ. ಸದ್ಯದ ಒಪ್ಪಂದವೇ ಅದಕ್ಕೊಂದು ಉತ್ತಮ ನಿದರ್ಶನ; ಅದೆಂದರೆ, ಒಂದೇ ಬಗೆಯ ಆಶಯವುಳ್ಳ ಜನರು ಒಂದೆಡೆ ಪ್ರಾದೇಶಿಕವಾಗಿ ವರ್ಗೀಕೃತವಾಗುವುದು. ಇಂದಿನ ರಾಜನೀತಿಜ್ಞರೆಲ್ಲ ಅದರ ಮೇಲೆಯೇ ಎಲ್ಲ ಭರವಸೆಯನ್ನು ಇಟ್ಟಂತಿದೆ; ಅಂತಾರಾಷ್ಟ್ರೀಯ ಸ್ಥಿರ ಸೌಹಾರ್ದ ಮತ್ತು ಕೊನೆಯದಾದ ಜಾಗತಿಕ ಸರಕಾರ ಇವುಗಳಿಗೆ ಅದೇ ಆಧಾರ ಎಂದು ನಂಬಿದಂತಿದೆ.

ಒಪ್ಪಂದವನ್ನಷ್ಟೇ ಅವಲೋಕಿಸಿ ಹೇಳುವುದಾದರೆ ಬ್ರಿಟನ್ನು ಆ ವಿಷಯದಲ್ಲಿ ಒಂದು ಒಕ್ಕಟ್ಟಾದ ನಾಡೆನ್ನಬೇಕು. ಟೋರಿಗಳು ಈ ಒಪ್ಪಂದವನ್ನು ವಿಶೇಷ ಉತ್ಸವದಿಂದ ಸ್ವಾಗತಿಸಿದರು. "ಪಾಶ್ಚಾತ್ಯ ಮಾನವ ಮತ್ತು ಅವನ ನಾಗರಿಕತೆ ಇವುಗಳಲ್ಲಿ ಹೊಸದೊಂದು ಅಧ್ಯಾಯ ಪ್ರಾರಂಭವಾಯಿತೆಂಬುದರ ಬಗ್ಗೆ ಯಾರು ಸಂದೇಹ ಪಟ್ಟಾರು?" ಎಂದು ಅವರ ಮುಖ ಪತ್ರಿಕೆಯೊಂದು ಹೇಳಿತು.

ಹೊಸ ಅಧ್ಯಾಯ ಪ್ರಾರಂಭವಾದದ್ದೂ ನಿಜ; ತಾನೇ ಸರ್ವಶಕ್ತ, ತಾನೇ ಕಂಪಮಾನ ಯುರೋಪ್ಯ ತುಲಾಯಂತ್ರಕ್ಕೆ ಸಮತೋಲವನ್ನು ತಂದು ಕೊಟ್ಟದ್ದು ಮತ್ತು ತಾನೀಗ ೧೫೪ ವರ್ಷಗಳ ಬಳಿಕ ತನ್ನ ಕರಾರಿನ ಪ್ರಕಾರ ಯುರೋಪಿನೊಡನೆ ಒಂದಾದೆನು ಎಂದು ಜಂಭ ಕೊಚ್ಚಿಕೊಳ್ಳಲು ಅಮೇರಿಕಕ್ಕೆ ಅನುಕೂಲವಾದುದೂ ನಿಜ. ಆದರೆ ಅಮೇರಿಕದ ಹೆನ್ರಿ ವ್ಯಾಲೇಸರು ಹೇಳುವಂತೆ ಇದರಿಂದ ಪಾಶ್ಚಾತ್ಯ ಮತ್ತು ಪೌರಸ್ತ್ಯರ ಸಂಬಂಧ ಕಹಿಯಾಗುವಂತಾಯಿತು. ಅಲ್ಲದೆ, ಅಲ್ಲಿಯ ಕಾಮರ್ಸ್ ಪತ್ರಿಕೆ ಬರೆದಂತೆ ಮಾರ್ಶಲ್ ಯೋಜನೆಯನ್ವಯ ಸಾಮಾನ್ಯ ಸಾಮಾನುಗಳನ್ನು ಯುರೋಪಿಗೆ ಕಳಿಸುವುದರ ಜೊತೆಗೆ ಈ ಕರಾರಿನ ಪ್ರಕಾರ ಯುದ್ಧೋಪಕರಣಗಳನ್ನೂ ಕಳಿಸಿದರೆ ಅಮೇರಿಕದಲ್ಲಿ ಕೊರತೆ ಮತ್ತು ಅತಿಪ್ರಸರಣ ಉಂಟಾಗದಿರದು.

### ಪರಿಶೀಲನಾರ್ಹ ಸಲಹೆ

ಕಳೆದ ವಾರ ಮಾರ್ಶಲ್ ಟಿಟೋನ ಸುದ್ದಿ ಇಲ್ಲಿಯ ಪತ್ರಿಕೆಗಳಲ್ಲಿ ತುಂಬಿತ್ತು. ರಶಿಯವು ತನ್ನ ಉಪಗ್ರಹಗಳ ಮೂಲಕ ಅವನನ್ನು ದಂಡಿಸುವುದು ಎಂಬ ಸುದ್ದಿ ಜನಜನಿತವಾಗಿತ್ತು. ಧ್ಯೇಯಗಳಲ್ಲಿ ಬ್ರಿಟನ್ನಿಗೂ ಯುಗೋಸ್ಲೇವಿಯಕ್ಕೂ ಯಾವ ಸಾಮ್ಯವೂ ಇರದಿದ್ದರೂ ಅದಕ್ಕೆ ನೆರವಾದರೆ ಟಿಟೋ ಸ್ವತಂತ್ರನಾಗಿ ಮಿಕ್ಕ ಉಪಗ್ರಹಗಳಿಗೆ ಮಾದರಿ ಹಾಕಿಕೊಟ್ಟು, ತನ್ಮೂಲಕ ರಶಿಯದ ಸಾಮ್ರಾಜ್ಯ ಒಡೆದು ಹೋಗುವಂತಾಗಿ, ಕಮ್ಯುನಿಸ್ಟ ರಾಷ್ಟ್ರಗಳೊಡನೆ ಬ್ರಿಟನ್ನು ಗೆಳೆತನದಿಂದ ಇರಲು ಸಾಧ್ಯವಾಗುವುದು ಎಂಬ ಸಲಹೆಯನ್ನು ಸರಕಾರ ಪರಿಶೀಲಿಸಬಹುದಾಗಿದೆ.

ಏಪ್ರಿಲ್ ಅಂತ್ಯದಲ್ಲಿ ಕಾಮನ್‌ವೆಲ್ತ ಪರಿಷತ್ತನ್ನು ನಡೆಸಲು ಬೇಕಾದ ಸಿದ್ಧತೆಗಳು ಆಗಲೇ ಮುಗಿದಿವೆ ಎಂದು ಸಾರಲಾಗಿದೆ. ಪಂಡಿತ ನೆಹರು ಅದಕ್ಕೆ ಹೋಗಬಹುದೆಂದೂ ಆಗ ಸದ್ಯಃ ಸ್ವತಂತ್ರ ಪ್ರಜಾರಾಜ್ಯವಾಗಲು ನಿರ್ಧರಿಸಿದ ಭಾರತದ ಭಾವಿ ಸ್ಥಾನಮಾನಗಳ ಬಗ್ಗೆ ಚರ್ಚೆ ನಡೆಯಬಹುದೆಂದೂ ತರ್ಕಿಸಲಾಗಿದೆ. ಹೊಸದಿಲ್ಲಿಯಿಂದ "ನ್ಯೂಸ್ ಕ್ರಾನಿಕಲ್ಲಿ"ನ ಸುದ್ದಿಗಾರ ನಾರ್ಮನ್ ಕ್ಲಿಫನು ಈ ಪರಿಷತ್ತಿನಲ್ಲಿ ಯಾವ ಕರಾರುಗಳ ಪ್ರಕಾರ ಭಾರತ ತನ್ನ ಸದಸ್ಯತ್ವವನ್ನು ಉಳಿಸಿಕೊಳ್ಳುವುದು ಎಂಬುದು ಕೊನೆಯದಾಗಿ ನಿರ್ಧಾರವಾಗಬಹುದು ಎಂದು ಬರೆಯುತ್ತಾನೆ.

(೯ ನೇ ಪುಟದಿಂದ)

ಸಂಯೋಗ ಮತ್ತು ಸಹಕಾರಗಳು ಪ್ರತಿನಿತ್ಯದ ಅನುಭವಗಳಲ್ಲ. ಅದುದರಿಂದ ನಾಳೆ ಬರುವ ಸಭೆಗೆ ನೀವು ಬರಲು ಅನುಕೂಲ ಮಾಡಿಕೊಳ್ಳುವುದಲ್ಲದೆ ಸಹವಿಶ್ವಸ್ತರಿಗೂ ಹಾಗೆ ಮಾಡಲು ಹೇಳುವಿರೆಂದು ನಾನು ನಂಬುತ್ತೇನೆ.

ನಿಮ್ಮ ಮೋ. ಕ. ಗಾಂಧಿ
(ಗುಜರಾತಿಯಲ್ಲಿ ಸಹಿ ಮಾಡಿದ್ದು)
ಶ್ರೀ ಜೆ. ಆರ್. ಡಿ. ತಾತಾ
ಬಾಂಬೆ ಹೌಸ್,
ಬ್ರೂಸ್‌ಸ್ಟ್ರೀಟ್,
ಮುಂಬಯಿ.

### ಚಂದಾದಾರರಲ್ಲಿ ವಿನಂತಿ

ಯಾವದೆ ಪತ್ರವ್ಯವಹಾರ ಮಾಡುವಾಗ್ಗೆ ನಿಮ್ಮ ಚಂದಾ ನಂಬರನ್ನು ಅಂದರೆ ನಾವು ನಿಮ್ಮ ವಿಳಾಸದ ಪ್ರಾರಂಭಕ್ಕೆ ಸೇರಿಸಿದ ನಂಬರನ್ನು ಬರೆದರೆ ಮಾತ್ರ ನಿಮ್ಮ ಪತ್ರಕ್ಕೆ ಲಕ್ಷ್ಯಗೊಡಲಾಗುವದು. ಅವಧಿ ಮುಗಿಯುವ ಮುಂಚೆಯೇ ೧೫ ದಿನ ಪೂರ್ವದಲ್ಲಿ ವ್ಹಿ. ಪಿ. ಮಾಡಲಾಗುವದು. ವ್ಹಿ. ಪಿ. ಬೇಡಾದವರು ೧೫ ದಿನ ಮೊದಲೇ ನಮಗೆ ತಿಳಿಸಬೇಕು. ವ್ಹಿ. ಪಿ. ನಿರಾಕರಿಸಿ ಹಿಂದುಗಡೆ M. O. ಮಾಡಿದರೆ ವ್ಹಿ. ಪಿ. ಖರ್ಚು ಮುರಿಯಲಾಗುವದು.

### ಕರ್ಮವೀರ ಚಂದಾ ವಿವರ

ಅಂಚೆವೆಚ್ಚ ಹಿತ (ಚಂದಾಹಣ ಮುಂಗಡ)

| | |
|---|---|
| ೧ ವರ್ಷ . . . . | ೬-೪-೦ |
| ೬ ತಿಂಗಳಿಗೆ . . . | ೩-೪-೦ |
| ೩ ,, , . . . | ೧-೧೨-೦ |

ವ್ಹಿ. ಪಿ. ಯಿಂದ ತರಿಸಿಕೊಂಡಲ್ಲಿ ಹೆಚ್ಚಿಗೆ ಬೀಳುವದು.

## ವ್ಯಾಪಾರ ಪ್ರಪಂಚ

### ಮುಂಬಯಿ ಶೇರಪೇಟೆ

ತಾ. ೩೧

ಪೇಟೆಯಲ್ಲಿ ಹಣದ ಮುಗ್ಗಟ್ಟು ಇನ್ನೂ ಕಡಿಮೆಯಾಗದೆ ಬ್ಯಾಂಕ್ ಬಡ್ಡಿದರಗಳು ಕೂಡ ಹೆಚ್ಚಿರುವುದಲ್ಲದೆ ಆ ದರದಲ್ಲಿ ಕೂಡ ಸಾಲ ದೊರೆಯುವದು ಕಠಿನ ಹೋಗಿರುವದರಿಂದ ಮಾರುವವರ ಒತ್ತಡ ಹೆಚ್ಚಿ ಒಂದೇ ಸವನೆ ಬೆಲೆಗಳು ಇಳಿದಿವೆ. ಟಾಟಾ ಡೆಫರ್ಡ ಪಾಲುಗಳು ಈಗೆರಡು ವಾರದೊಳಗೆ ೨೦೦ ರೂಪಾಯಿಯನ್ನು ಕಳೆದುಕೊಂಡಿವೆ, ಇಂದಿನ ಬೆಲೆಗಳು ಹೀಗಿದ್ದವು.

| | |
|---|---|
| ಕೋಹಿನೂರು | ೨೯೩-೮-೦ |
| ಮುಂಬಯಿ ಡಾಯಿಂಗ್ | ೯೫೭-೮-೦ |
| ಸ್ವದೇಶಿ | ೪೦೪-೦-೦ |
| ಗೋಕಾಕ | ೨೯೩-೦-೦ |
| ಸೆಂಚುರಿ | ೨೫೧-೦-೦ |
| ಬೇಲಾಪುರ ಸಕ್ಕರೆ | ೨೧೫-೮-೦ |
| ಇಂಡಿಯನ್ ಆಯರ್ನ | ೨೭-೫-೦ |
| ಅಸೋ. ಸಿಮೆಂಟ | ೧೭೬-೮-೦ |
| ಟಾಟಾ ಸ್ಟೀಲ ಡೆಫರ್ಡ | ೧೪೭೩ ೮-೦ |
| ಇಂಪೀರಿಯಲ್ ಬ್ಯಾಂಕ್(ಪೂರ್ಣ) | ೧೮೭೭-೮-೦ |
| ಬ್ಯಾಂಕ ಆಫ್ ಇಂಡಿಯಾ | ೧೯೪-೮-೦ |
| ಸೆಂಟ್ರಲ ಬ್ಯಾಂಕ್ | ೮೫-೮-೦ |

### ಚಿನ್ನ ಬೆಳ್ಳಿ

ಕಳೆದವಾರ ಪ್ರಾರಂಭವಾದ ಏರಿಕೆ ಈ ವಾರವೂ ಮುಂದೆ ಸಾಗಿ ಇಂದು ಈ ರೀತಿ ಬೆಲೆಗಳು ಕೊನೆಗಂಡವು.

| | |
|---|---|
| ಚಿನ್ನ ತಯಾರಿ | ೧೧೦-೦-೦ |
| ,, ವಾಯದಾ | ೧೦೭-೧೨-೦ |
| ಬೆಳ್ಳಿವಾಯದಾ ಮತ್ತು ತಯಾರಿ | ೧೭೪-೦-೦ |

### ಅರಳೆ

ಅರಳೆ ಪೇಟೆಯಲ್ಲಿ ಯಾವ ಹೆಚ್ಚುಕಡಿಮೆಯೂ ಇಲ್ಲ.

### ಎಣ್ಣೆಕಾಳು

| | |
|---|---|
| ಶೇಂಗಾ | ೧೮೯-೬-೦ |
| ಅಗಸಿ | ೨೯-೮-೦ |
| ,, (ಹೊಸ) | ೨೮-೧೪-೦ |
| ,, ಎಣ್ಣೆ | ೧೮-೮-೦ |
| ಔಡಲ | ೨೭-೧೨-೦ |

### ಶಿವಮೊಗ್ಗ

ತಾ. ೨೪

| | |
|---|---|
| ಕಡಿಹಸನ್ | ರೂ. ೪೨ ರಿಂದ ೪೪ |
| ದೇಶಾವರ ನಂ. ೧ | ೪೦-೪೨ |
| ,, ೨ | ೨೮-೨೯ |
| ರಾಜಾ ಆಲವು | ೨೭-೨೯ |
| ತೊರಸಾಲು | ೨೪-೨೬ |
| ಬೆಟ್ಟವಂತಿ | ೧೮-೧೮॥ |
| ಬೆಟ್ಟೆ | ೧೬॥-೧೭॥ |

ಬೇಡಿಕೆ ಚನ್ನಾಗಿದೆ.

### ಹುಬ್ಬಳ್ಳಿ

ತಾ. ೩೧

| | | | |
|---|---|---|---|
| ಜ. ಹತ್ತಿಕಾಳು | (೧ ರೂ. ಗೆ) | | ೮ ಪೌಂ |
| ವಿ. ಹತ್ತಿಕಾಳು | ,, (೧ ರೂ. ಗೆ) | | ೭ ಪೌಂ |
| ಕುಸುಬಿ | (ಬ. ಮಣಕ್ಕೆ) | ೧೫-೪-೦ | ೧೫-೬-೦ |
| ಅಗಸಿ | (ಚೀಲಕ್ಕೆ) | — | ೪೯-೦-೦ |
| ಔಡಲ | ,, | | ೪೯-೦-೦ |
| ಜ. ಹೆಸರು | ,, | ೬೨-೦-೦ | ೬೬-೮-೦ |
| ಕರಿ ಎಳ್ಳು | ,, | | ೬೪-೬೬ |
| ಬಿಳಿ ಎಳ್ಳು | ,, | | ೭೪ |
| ಕಡಲೆ | ,, | | ೫೬-೧೪-೨ |
| ಜ. ತೊಗರಿ | ,, | | ೪೪-೪೫ |
| ಹುರಳಿ | ,, | | ೪೪-೪೬ |
| ಕೆಂ. ಅಲಸಂದಿ | ,, | | ೫೫-೫೬ |
| ಬಿ. ಅಲಸಂದಿ | ,, | | ೫೮-೬೦ |
| ಶೇಂಗಾ (ಹೇರು) | | | ೫೦-೫೪ |

ಭಾರತ-ಝೆಕೋಸ್ಲೋವಿಯಗಳ ನಡುವೆ ಮಾರ್ಚ ೨೯ಕ್ಕಾದ ವ್ಯಾಪಾರ ಒಪ್ಪಂದದನ್ವಯ ೫ ಕೋಟಿ ರೂಪಾಯಿಯ ಸರಕು ಮತ್ತು ಸೇವೆಗಳನ್ನು ವಿನಿಮಯ ಮಾಡಿಕೊಳ್ಳಲು ಉಭಯ ರಾಷ್ಟ್ರಗಳು ನಿರ್ಧರಿಸಿವೆ. ಭಾರತವು ಕಚ್ಚಾ ಸಣಬು, ಮೆಂಗನೀಸ್, ಎಣ್ಣೆಕಾಳು, ಚರ್ಮ, ಮೊದಲಾದ ೧೭೦ ಲಕ್ಷ ರೂ. ಬೆಲೆಯ ಸರಕುಗಳನ್ನು ಕೊಡುವದು. ಝೆಕೊಸ್ಲೊವೇಕಿಯವು ೩೩೦ ಲಕ್ಷ ರೂ. ಬೆಲೆಯ ಯಂತ್ರ ಸಾಮಗ್ರಿಗಳನ್ನು ಕೊಡುವದು. ಅಲ್ಲದೆ ಝೆಕೊಸ್ಲೊವೇಕಿಯವು ತಾಂತ್ರಿಕ ಸಹಾಯವನ್ನೂ ಕೊಡುವದು.

# ಧೈರ್ಯದಾತ

( ಮಹಾತ್ಮಾಗಾಂಧಿಯವರಿಗೆ )



ಎತ್ತರಿಸಿರಿದನಿಯ ಜನರೆ
ಎತ್ತರಿಸಿರಿ ಹೋ !
ಸಂತೋಷದ ಹೊನಲ ಹರಿಸ
ಬನ್ನಿರಿದೋ ಹೋ !

೧

ಸವಿಪೊಗಳಿಕೆಯನ್ನಾತನ
ನಿಮ್ಮ ರಸನೆ ರಚಿಸಲಿ,
ಉಸಿರ ಕೋದು ತುಟಿಗಳೆದ್ದು
ಹಾಡನಾಗಿ ತರಿಸಲಿ;
ಎತ್ತರಿಸಿರಿ ಜನರೆ ದನಿಯ,
ಆದರಿಲ್ಲಿ ಕೇಳಿರಿ–
ನುಚ್ಚರದಿಂದವನ ಹೆಸರ-
ನುಸಿರಬೇಕು ನೋಡಿರಿ !

೨

ಮೆಲ್ಲನಿಯಲಿ ಪಠಿಸಿರಿ ಆ
ಸಣ್ಣವನಭಿದಾನವ–
ಸತ್ಯದಪೊಲು ಧೀರನ, ಆ
ಶ್ರದ್ಧಾಸ್ಥಿರಬುದ್ಧಿಯ,
ಶಾಂತಿಯ ಮರಿಯೆನಿಸಿ ಯೋಧ-
ಗಣವ ಲಜ್ಜೆಗೊಳಿಪನ,
ಕಿಡಿಗೇಡಿಯ ಕೀಳ್ಗಳೆವನ,
ತಂತ್ರಿಯನಣಕಿಸುವನ !

೩

ಅವನೆಂದೂ ಮಿಕ್ಕ ವಿಧಿವಿ-
ಧಾನಗಳಿಗೆ ಬಗ್ಗನು;
ಆತ್ಮಸಾಕ್ಷಿಯೊಂದಕ್ಕೇ,
ಪ್ರೇಮಧರ್ಮವೊಂದಕೇ
ಮಣಿಯುವಾತನಾಪುನೀತ-
ಹೇಳಿಂವನ ಹೆಸರನು;
ಅಣುವಿನಂತೆ ಅಲ್ಪನಾಗಿ
ಹೊರಗೆ ತೋರುತಿರುವನು !

೪

ಎತ್ತರಿಸಿರಿ ದನಿಯನು ಹೋ
ಆನಂದೋಲ್ಲಾದದ;
ಉಚ್ಚರಿಸಿರಿ ಹೆಸರ ಮಾತ್ರ
ನುಣ್ಣರದಲಿ ಮೆಲ್ಲಗೆ;
ಕಿರಿವಾತಿಂದನ್ನಿರಿ ಆ
ಕಿರಿನ್ಯೆಯ ಮಹಾತ್ಮನ
ಸುಸ್ವರ ಮಾರುತಗಳಿಗೇ
ಮರುಳು ಹಿಡಿಸಲಿಲ್ಲವೇ !

೫

ಆತನ ಬೂದಿಯ ಹೊನಲ್ಗಳ
ಸಿಹಿಯಾಗಿಸಲಿಲ್ಲವೇ !
ಅವನೆಂಥವ ಆ ಸಣ್ಣ ಮ–
ನುಷ್ಯ ! ಅವನ ಧೈರ್ಯವೋ
ಬಾಳಿನಲ್ಲದಷ್ಟೊ ಆಷ್ಟೆ
ಸಾವಿನಲ್ಲು ತಿಳಿಯಿರಿ.
ಅವನ ಭಜಿಸಿರಯ್ಯ ಜನರೆ,
ಅವನಹೆಸರ ಹೇಳಿರಿ !

೬

ಭಯ:ದಂಧ ತಮಸ್ಸು ಹಿಡಿದ,
ವಿದ್ವೇಷಾಘಾತದೆ
ಕುರುಡಾದೆದೆಗಳಲಿ ಉರಿವ
ಬೆಂಕಿಬೆರಳನಾಡಿಸಿ,
ಧೈರ್ಯದಕ್ಕರಗಳ ಬರೆದ
ಸಣ್ಣಾಳವ ಕಾಣಿರೇ.
ಅವನ ಹೆಸರನೊಲಿದು ಪಾಡಿ.
ರವನ ಭಜಿಸಿ ಲೋಗರೇ !

೭

ಎತ್ತರಿಸಿರಿ ಎತ್ತರಿಸಿರಿ
ಏರುದನಿಯ ವೀರರೇ,
ಆದರೆನ್ನಿರವನ ಹೆಸರ
ಮೆಲ್ಲನಿನುಚ್ಚರದಲಿ;
ಮತ್ತೆ ಮತ್ತೆ ಪಠಿಸಿರಿ ಆ
ತ್ಯಾಗವೀರನಾಮವ
ಆನಂದೋಲ್ಲಾಸಹಾಸ-
ಲಾಸ್ಯಬೆರೆದ ಕೊರಳಲಿ !

(ನ್ಯೂಯಾರ್ಕಿನಿಂದ ಶ್ರೀ ವೆಸ್ಸನ್ ಮೆಕ್‌ಡನೀಲ್ ಎಂಬ ಕವಿ ಬರೆದು ಕಳಿಸಿದ ಕವನದ ಅನುವಾದ— ಬಿ. ಎಚ್. ಶ್ರೀ )

# ಅಟ್ಲಾಂಟಿಕ್ ಒಪ್ಪಂದದ ಪೂರ್ಣ ಪಾಠ

ಕಮ್ಯುನಿಜಂ ಮತ್ತು ಬಂಡವಾಳ ಶಾಹಿಗಳಿಗೆ ಎಷ್ಟು ಸಲಿಗೆಯ ಸಂಬಂಧವಿರುವುದು ಸುವಿದಿತ. ೨ ನೆಯ ಮಹಾಯುದ್ಧದಲ್ಲಿ ಅನಿವಾರ್ಯವಾಗಿ ರಶಿಯ "ಮಿತ್ರ" ಎನಿಸಿಕೊಂಡಿತು. ಆದರೆ ಯುದ್ಧ ಮುಗಿದ ಮಾರನೆಯ ದಿನದಿಂದ ‘‘ಯೂಯಂ ಯೂಯಂ ವಯಂ ವಯಂ’’ ಎಂಬ ನೀತಿ ಪಾಶ್ಚಾತ್ಯ ಪೌರಸ್ತ್ಯ ಬಿಳಿಯರಲ್ಲಿ ಅಮಲಿನಲ್ಲಿ ಬರಲಾರಂಭಿಸಿತು. ೧೯೪೭ ರಲ್ಲಿ ಅಧ್ಯಕ್ಷ ಟ್ರೂಮನ್ನರು ಸಶಸ್ತ್ರ ಅಲ್ಪಸಂಖ್ಯರಿಂದ ಅಥವಾ ಹೊರಗಣ ಒತ್ತಾಯದಿಂದ ಭೀತಿಯುಳ್ಳ ಜನಾಂಗಗಳಿಗೆ ಬೆಂಬಲ ಕೊಡುವುದು ಅಮೇರಿಕದ ವಿದೇಶನೀತಿ ಎಂದು ಸಾರಿದರು. ಅದೇ ಕಾಲದಲ್ಲಿ ಕಮ್ಯುನಿಸ್ಟರನ್ನು ಹತ್ತಿಕ್ಕಲು ಗ್ರೀಸ್ ಮತ್ತು ತುರ್ಕಿಗಳಿಗೆ ಅಮೇರಿಕ ಧನಸಹಾಯ ನೀಡಿತು. ಕೆಲ ತಿಂಗಳುಗಳ ಬಳಿಕ ಮಾರ್ಶಲ್ ಯೋಜನೆ ರೂಪಿತವಾಯಿತು. ಲ್ಯಾಟಿನ್ ಅಮೇರಿಕದ ೨೦ ರಾಜ್ಯಗಳೊಡನೆ ಸಂಯುಕ್ತ ಸಂಸ್ಥಾನ ಪರಸ್ಪರ ಸಂರಕ್ಷಣದ ಒಪ್ಪಂದ ಮಾಡಿಕೊಂಡಿತು. ಸಂ. ರಾ. ಸಂಘದ ತಾಮ್ರಪಟದ ೫೧ ನೆಯ ಪರಿಚ್ಛೇದಾನುಸಾರ ನಡೆದ ಮೊದಲ ಪ್ರಾದೇಶಿಕ ಒಪ್ಪಂದವೆಂದರೆ ಇದೇ. ಕಳೆದ ವರ್ಷ ಬ್ರಿಟನ್, ಫ್ರಾನ್ಸ್, ಬೆಲ್ಜಿಯಂ, ನೆದರ್‌ಲೆಂಡ್ಸ್ ಮತ್ತು ಲಕ್ಸೆಂಬರ್ಗಗಳು ೫೦ ವರ್ಷಗಳ ಪರಸ್ಪರ ಸಂರಕ್ಷಣೆಯ ಒಡಂಬಡಿಕೆಯನ್ನು ಇದೇ ದೃಷ್ಟಿಯಿಂದ ಮಾಡಿಕೊಂಡದ್ದು ಸರ್ವವಿದಿತವಾಗಿದೆ. ಮತ್ತೆ ೩ ತಿಂಗಳ ನಂತರ ಅಮೇರಿಕ ವ್ಯಾಂಡೆನ್ ಬರ್ಗ್ ಠರಾವನ್ನು ಸ್ವೀಕರಿಸಿತು. ಅದರ ಪ್ರಕಾರ ಸ್ವರಕ್ಷಣೆ ಮತ್ತು ಪರಸ್ಪರ ಸಂರಕ್ಷಣೆಯ ಬಗ್ಗೆ ವ್ಯವಸ್ಥೆಗೊಳಿಸತಕ್ಕದ್ದೆಂದು ನಿರ್ಣಯವಾದಂತಾಯಿತು. ಈ ಮಂತ್ರಿ ಅರ್ನೆಸ್ಟ್ ಬೆವಿನ್ನರೂ ಅಧ್ಯಕ್ಷ ಟ್ರೂಮನ್ನರೂ ಬ್ರುಸೆಲ್ಸ್ ಒಪ್ಪಂದದಲ್ಲಿ ಕೂಡಿದ ರಾಷ್ಟ್ರಪ್ರತಿನಿಧಿಗಳೆದುರು ಅಟ್ಲಾಂಟಿಕ್ ಒಪ್ಪಂದವನ್ನು ಪ್ರಸ್ತಾಪಿಸಿದ್ದು ಇಂದು ಫಲಿಸಿತು.

ಅಟ್ಲಾಂಟಿಕ್ ಒಪ್ಪಂದದ ಪೂರ್ಣಪಾಠವನ್ನು ಮೊನ್ನೆ ತಾ೧೮ ರಲ್ಲಿ ಬ್ರಿಟನ್, ಫ್ರಾನ್ಸ್ ಮೊದಲಾದ ಏಳು ಪಾಶ್ಚಾತ್ಯರಾಷ್ಟ್ರಗಳ ರಾಜಧಾನಿಗಳಲ್ಲಿ ಪ್ರಸಿದ್ಧಿಸಲಾಯಿತು. ಕೆಳಗಿನವು ಒಪ್ಪಂದದ ಮುಖ್ಯ ಪರಿಚ್ಛೇದಸಾರಗಳು.

೧. ಒಪ್ಪಂದ ಮಾಡಿಕೊಂಡ ರಾಷ್ಟ್ರಗಳು ಅಂತಾರಾಷ್ಟ್ರೀಯ ವಿವಾದಗಳನ್ನು ಸಂ. ರಾ. ಸಂಘದ ತಾಮ್ರಪಟಾನುಸಾರವಾಗಿ ಶಾಂತವಾಗಿ ಬಿಡಿಸಿಕೊಳ್ಳಬೇಕು.

೨. ಅವು ಅಂತಾರಾಷ್ಟ್ರೀಯ ಆರ್ಥಿಕ ಬಿಕ್ಕಟ್ಟು ಉಂಟಾಗದಂತೆ ತಮ್ಮಲ್ಲಿ ಆರ್ಥಿಕ ಸಹಾಯವನ್ನು ಮಾಡಿಕೊಳ್ಳಬಲ್ಲವು.

೩. ಸಶಸ್ತ್ರ ದಾಳಿಯಾದರೆ ಅದನ್ನು ಎದುರಿಸುವ ಬಗ್ಗೆ ವೈಯಕ್ತಿಕ ಮತ್ತು ಸಾಮೂಹಿಕ ಶಕ್ತಿಯನ್ನು ಸಂಪಾದಿಸಿಕೊಂಡು ಕಾಪಾಡಿಕೊಳ್ಳತಕ್ಕದ್ದು.

೪. ೫.೬. ಸದಸ್ಯ ರಾಷ್ಟ್ರಗಳಲ್ಲಿ ಒಂದು ಪರಾಕ್ರಮಣ ಭೀತಿಗೊಳಗಾದರೆ ಅದರ ನೆರವಿಗೆ ಸಹಸದಸ್ಯ ರಾಷ್ಟ್ರಗಳೆಲ್ಲ ಬದ್ಧವೆನಿಸುವುವು.

೭. ಈ ಒಪ್ಪಂದಕ್ಕೆ ಸಹಿಹಾಕಿದ ರಾಷ್ಟ್ರಗಳು ಸಂ. ರಾ. ಸಂಘದ ಸದಸ್ಯರಿರುವುದರಿಂದ ಜಾಗತಿಕ ಶಾಂತಿಯನ್ನು ರಕ್ಷಿಸಲು ಭದ್ರತಾ ಮಂಡಲ ಕೊಡುವ ಆದೇಶವನ್ನು ಅವು ಮನ್ನಿಸಬೇಕು. ಇದರಿಂದ ಸಂ. ರಾ. ಸಂಘದ ಸದಸ್ಯ ರಾಷ್ಟ್ರಗಳ ಹಕ್ಕುಬಾಧ್ಯತೆಗಳಿಗೆ ಬಾಧೆ ಬರಲಾರದು.

೮. ಈ ಒಪ್ಪಂದಕ್ಕೊಳಗಾದ ರಾಷ್ಟ್ರಗಳು ಪರಸ್ಪರವಾಗಿ ಅಥವಾ ಅನ್ಯರಾಷ್ಟ್ರಗಳೊಡನೆ ಈ ವರೆಗೆ ಮಾಡಿಕೊಂಡಿರುವ ಒಪ್ಪಂದಗಳಿಗೆ ಈ ಅಟ್ಲಾಂಟಿಕ್ ಒಪ್ಪಂದದ ಯಾವ ಪರಿಚ್ಛೇದವೂ ವಿರೋಧವಾಗಲಾರದು ಮತ್ತು ಇನ್ನು ಮುಂದೆ ಈ ಒಪ್ಪಂದಕ್ಕೆ ಹೊಂದದ ಯಾವ ಒಪ್ಪಂದವನ್ನೂ ಅನ್ಯ ರಾಷ್ಟ್ರಗಳೊಡನೆ ಮಾಡಿಕೊಳ್ಳಲಾಗದು.

೯. ಈ ಒಪ್ಪಂದವನ್ನು ಕಾರ್ಯರೂಪಕ್ಕಿಳಿಸಲು ಸಂಬಂಧಿಸಿದ ವಿಷಯಗಳನ್ನು ಚರ್ಚಿಸಿ ನಿರ್ಣಯಕ್ಕೆ ಬರಲು ಒಪ್ಪಂದಕ್ಕೆ ಅಂಕಿತ ಹಾಕಿದ ರಾಷ್ಟ್ರಗಳ ಒಬ್ಬೊಬ್ಬ ಪ್ರತಿನಿಧಿಯುಳ್ಳ ಒಂದು ಸಮಿತಿಯನ್ನು ರಚಿಸತಕ್ಕದ್ದು. ಈ ಸಮಿತಿ ಬೇಕಾದ ಉಪಸಮಿತಿಗಳನ್ನೂ ಸಂರಕ್ಷಣಾ ಮಂಡಲವನ್ನೂ ಸ್ಥಾಪಿಸಬಲ್ಲುದು.

# ಪ್ರಾಚೀನ ಭಾರತದಲ್ಲಿ ಮೇಳಸಂಗೀತ

ಭಾರತ ತನ್ನ ಪ್ರಾಚೀನ ಕಲೆಗಳಲ್ಲಿ ಅನೇಕವನ್ನು ಉಳಿಸಿಕೊಂಡಿದೆ. ಆದರೆ ಅದು ಮೇಳ. ಸಂಗೀತ (Group Music) ವನ್ನು ಮಾತ್ರ ಕಳೆದುಕೊಂಡಿದೆ. ಹೀಗಾಗಲು ಕಾಲಕ್ರಮೇಣ ಉಂಟಾದ ಸಾಮಾಜಿಕ ಪರಿವರ್ತನಗಳೇ ಕಾರಣ.

ಮೇಳಸಂಗೀತದಲ್ಲಿ ಸ್ತ್ರೀಪುರುಷರಿಬ್ಬರೂ ಭಾಗವಹಿಸುತ್ತಿದ್ದರು. ಅವರು ಗುಂಪು ಅಥವಾ ಪಕ್ಷಗಳನ್ನು ಮಾಡಿಕೊಂಡು ವಾದ್ಯವಾದನದೊಡನೆ ಬಾಯಿಂದ ಒಟ್ಟೊಟ್ಟಿಗೆ ಹಾಡುತ್ತಿದ್ದರು. ಇದು ಹಿಂದೆ ಬಹಳ ಜನ. ಪ್ರಿಯವಾಗಿತ್ತು.

ಹಳೆಯ ಸಂಸ್ಕೃತ ಗ್ರಂಥವಾದ ‘‘ಖಿಲ’’ ಹರಿವಂಶವು ಇಂಥ ಮೇಳ ಸಂಗೀತ ಸಮಾರಂಭದ ಒಂದು ವರ್ಣನೆಯನ್ನು ಕೊಡುತ್ತದೆ. ಯಾದವರ ಒಂದು ಪ್ರಸಿದ್ಧ ಜಲೋತ್ಸವದಲ್ಲಿ ಕೃಷ್ಣನು ಒಮ್ಮೆ ಹಾಡುಗಾರ, ಸಂಗೀತಗಾರ, ನರ್ತಕ, ಆಟಗಾರ ಮುಂತಾದವರೊಡನೆ ಸಮುದ್ರತೀರದಲ್ಲಿ ವಿಹರಿಸಲು ಹೋದನು. ಅಲ್ಲಿ ಒಂದುಸಂಗೀತ ಸಮಾರಾಧನೆನಡೆಯಿತು. ಆನಂದಭರದಲ್ಲಿ ಬಲರಾಮನು ತನ್ನ ಹೆಂಡತಿ ರೇವತಿಯೊಡನೆ ಅಗ ಕೈತಟ್ಟಿ ಕುಣಿಯಲಾರಂಭಿಸಿದನು. ಅದನ್ನು ನೋಡಿ ಕೃಷ್ಣನು ಸತ್ಯಭಾಮೆಯೊಡನೆ, ಅರ್ಜುನ ಸುಭದ್ರೆಯೊಡನೆ, ಮತ್ತು ಇತರರು ಅವರವರಹೆಂಡತಿಯರೊಡನೆ ಸಾಮೂಹಿಕವಾಗಿ ಹಾಡುತ್ತ ಕುಣಿಯಲಾರಂಭಿಸಿದರು. ಹಿಂದುಸ್ತಾನದ ಸಂಗೀತದ ಮೂಲಪುರುಷನಾದ ನಾರದಮಹರ್ಷಿಯೇ ಸ್ವತಃ ಆ ಮೇಳಸಂಗೀತದ ನಿರ್ದೇಶಕನಾಗಿದ್ದನು. ಈ ಸಮಾರಂಭ ಮುಗಿದೊಡನೆ ಸಭಿಕರು ಇಬ್ಬಣವಾಗಿ ಜಲಕ್ರೀಡೆಗೆಂದು ಕಡಲಲ್ಲಿ ಧುಮುಕಿದರು.

ಸಂಜೆಯಾಗುತ್ತ ಬಂದಿತು. ಚಂದ್ರೋದಯವಾಯಿತು. ಅಗ ಆ ರಸಿಕರು ಛಾಲಿಕ್ಯ ಗೀತವೆಂಬ ಹೊಸಬಗೆಯ ಆಟವನ್ನು ಶುರು ಮಾಡಿದರು. ಅದರಲ್ಲಿ ಭಾಗವಹಿಸಲು ಪ್ರಸಿದ್ಧ ಸಂಗೀತಜ್ಞರು ಮಾತ್ರ ಮುಂದೆ ಬಂದರು. ನಾರದರು ವೀಣಾವಾದನ ಮಾಡುತ್ತ ಹಾಡತೊಡಗಿದನು. ಅರ್ಜುನನು ಮೃದಂಗವನ್ನು ಬಾರಿಸಿದನು. ಕೃಷ್ಣನು ಕೊಳಲನ್ನು ಊದಿದನು. ಗೋಪಿಯರು ಅವನ ಸುತ್ತ ವರ್ತುಲವಾಗಿ ಕುಣಿದರು. ಛಾಲಿಕ್ಯಗೀತವನ್ನು ಅತಿ ಪ್ರೌಢ ಸಂಗೀತಗಾರರಲ್ಲದೆ ಅನ್ಯರು ಆರಂಭಿಸಕೂಡದೆಂದು ಮೇಲಿನ ಗ್ರಂಥದಲ್ಲಿ ಹೇಳಿದೆ.

ಅದೇ ಗ್ರಂಥವು ಹಳೆಯಕಾಲದನೃತ್ಯನಾಟ್ಯ (Dance Drama) ಒಂದರ ವಿಷಯವನ್ನು ಎತ್ತಿ ಹೇಳಿದೆ. ದಾನವರ ದೇಶಗಳಲ್ಲಿ ನಟವೇಷಧಾರಿಗಳಾಗಿದ್ದ ಯಾದವರು ಅದನ್ನು ಆಡುತ್ತಿದ್ದುದಾಗಿ ಅದು ಉಲ್ಲೇಖಿಸಿದೆ. ದಾನವರಾಜಧಾನಿಯಾದ ವಜ್ರಪುರದಲ್ಲಿಯ ರುದ್ರೋತ್ಸವದಲ್ಲಿ ಆ ನಟರು ಬಹುಮಾನಿಸಲ್ಪಟ್ಟರು. ಗಂಗಾವತರಣವೇ ಕಥಾವಸ್ತುವಾಗಿತ್ತು. ಪ್ರದ್ಯುಮ್ನನು ಮಹಾದೇವನ ಪಾತ್ರವನ್ನು ವಹಿಸಿ ಕೈಲಾಸವನ್ನು ತಲೆಯ ಮೇಲೆ ಹೊತ್ತಂತೆ ನಟಿಸಿದನು. ಇಡೀ ಕಥೆಯನ್ನು ನೃತ್ಯ ಮತ್ತು ಗೀತಗಳಿಂದಲೇ ಆವಿಷ್ಕರಿಸಲಾಯಿತು. ಇದರಿಂದ ಡಿ. ರವೀಂದ್ರನಾಥರು ತಂದ ನೃತ್ಯ-ನಾಟ್ಯ ಭಾರತಕ್ಕೆ ಹೊಸದಲ್ಲವೆಂಬುದು ಸಿದ್ಧವಾಗುತ್ತದೆ.

( ರಾಜೇಶ್ವರ ಮಿತ್ರರ ಲೇಖನದ ಅನುವಾದ- ಶ್ರೀ )

---

● ಸೋವಿಯಟ್ ಪ್ರತಿನಿಧಿ ಶ್ರೀ ವಿ. ಪಿ. ವಾಸಿಲೀವನು ಕೊಲಂಬೋದಲ್ಲಿ ರಶಿಯದ ಗೋದಿ, ಸಕ್ಕರೆ ಮತ್ತು ಗೊಬ್ಬರಗಳಿಗೆ ಬದಲಾಗಿ ಚಹ ಮತ್ತು ರಬ್ಬರನ್ನು ಕೊಡಬೇಕೆಂದು ವಿನಿಮಯವ್ಯಾಪಾರದ ಮಾತಾಡಲು ಬಂದಿಳಿದನೆಂದು ಸುದ್ದಿ.

---

೧೦. ಈ ರಾಷ್ಟ್ರಗಳು ಭದ್ರತೆಗಾಗಿ ತಮ್ಮ ಒಕ್ಕೂಟವನ್ನು ಸೇರಲು ಬೇರೆ ಐರೋಪ್ಯ ರಾಷ್ಟ್ರಗಳನ್ನು ನಿಮಂತ್ರಿಸಬಲ್ಲವು.

೧೧. ೧೨.೧೩. ಒಪ್ಪಂದಕ್ಕೆ ಸಹಿ ಹಾಕಿದ ರಾಷ್ಟ್ರ ತನ್ನ ಸರಕಾರದ ಘಟನೆಯಲ್ಲಿ ಅದಕ್ಕೆ ಮನ್ನಣೆ ಕೊಡಿಸಿ ಅಮೇರಿಕಕ್ಕೆ ಕಳಿಸಬೇಕು. ೧೦ ವರ್ಷಗಳ ನಂತರ ಈ ಒಪ್ಪಂದದಲ್ಲಿ ತಿದ್ದುಪಡಿ ಅವಶ್ಯವೆನಿಸಿದರೆ ಮಾಡಬಹುದು ಮತ್ತು ೨೦ ವರ್ಷಗಳ ನಂತರ ಇವರ ಸದಸ್ಯರು ಇದರಿಂದ ಮುಕ್ತರಾಗಬೇಕೆಂದು ಬಯಸಿದರೆ ಮುಕ್ತರಾಗಬಹುದು.



"ಸಂಸಾರ" ಚಿತ್ರಾಲಯದ "ಅಪು[illegible] ಅಥವಾ "ಅನೋಖಿ ಕುರ್ಬಾನಿ"ಯಲ್ಲಿ ಪ್ರೇಮ ಕಾಂತನೆಂಬ ಆಕರ್ಷಕನಾದ ಹೊಸ ತಾರೆ.

---

ಸರಕಾರೀ ಮುಖಂಡರು ಮಂತ್ರಿಮಂಡಲದ ಶಾಂತಿಯ ಕರಾರುಗಳನ್ನು ನಿರ್ಧರಿಸಲು ಮುಖ್ಯಮಂತ್ರಿ ಹೋ ಯಿಂಗ್ ಚಿನ್ನರ ಮನೆಯಲ್ಲಿ ಸಭೆಸೇರಿ ಚರ್ಚೆ ಮಾಡಿದರು. ಶಾಂತಿಯ ಮಾತುಕತೆಗಳು ನಡೆಯಲಿರುವ ಪೀಪಿಂಗಿಗೆ ಕಮ್ಯುನಿಸ್ಟ್ ಮುಖಂಡರು ಬಂದಿಳಿದರೆಂದು ಕಮ್ಯುನಿಸ್ಟ್ ರೇಡಿಯೋ ಸಾರಿದೆ.

× × ×

ದಕ್ಷಿಣ ಆಫ್ರಿಕದ ಭಾರತೀಯ ಕಾಂಗ್ರೆಸ್ಸಿನ ಅಧ್ಯಕ್ಷರಾದ ಡಾ. ಜಿ. ಎಂ. ನಾಯ್ಕರಿಗೆ ನ್ಯೂಯಾರ್ಕಿನಲ್ಲಿ ನಡೆವ ಸಾಂಸ್ಕೃತಿಕ ಮತ್ತು ವೈಜ್ಞಾನಿಕ ಜಾಗತಿಕ ಶಾಂತಿಸಭೆಗೆ ಹೋಗಲು ಸರಕಾರವು ಅನುಮತಿ ಪತ್ರ ಕೊಡಲೊಪ್ಪಲಿಲ್ಲ.

---

# ವಾರದ ಭವಿಷ್ಯ

ಜ್ಯೋತಿಷಿ:- ಕೃಷ್ಣಶಾಸ್ತ್ರಿ ಭಿಡೆ ಭವಿಷ್ಯ ಕಥನ ಆಫೀಸ ಖಡೇಬಝಾರ, ಬೆಳಗಾವಿ

## ಎಪ್ರಿಲ ೪ ರಿಂದ ೧೦ ರ ವರೆಗೆ

### ಮೇಷ

ತುಂಬ ವ್ಯಗ್ರಚಿತ್ತರಾದರೆ ಮಾತ್ರ ನೀವು ಈ ವಾರ ಬುದ್ಧಿಯನ್ನು ಸ್ಥಿಮಿತದಲ್ಲಿಟ್ಟುಕೊಳ್ಳಲಿಕ್ಕಿಲ್ಲ. ನಿಮ್ಮ ಮತ್ತು ನಿಮ್ಮವರ ಪ್ರಕೃತಿ ಚನ್ನಾಗಿಲ್ಲದ್ದೊಂದು ಚಿಂತೆ; ಮಕ್ಕಳು ದೊಡ್ಡಿಗೆಳ್ಳಿಸುವಂತೆ ವರ್ತಿಸುವದು ಇನ್ನೊಂದು. ಹೆಂಡತಿಯು ತೌರು ಮನೆಯವರು ಮನಬಂದಂತೆ ಆರೋಪ ಹೊರಿಸುವರು. ತುದಿ ಮೊದಲಿಲ್ಲದ ಪ್ರಾಪಂಚಿಕ ತಾಪತ್ರಯ. ಪ್ರಿಯಜನರು ಬರುವದರಿಂದ ಮನಸ್ಸಿಗೆ ಸುಸಮಾಧಾನ. ಉದ್ಯೋಗದಲ್ಲಿ ಪ್ರತಿಷ್ಠೆ ಲಾಭಗಳು ಚನ್ನಾಗಿದ್ದರೂ ಗಡಿಮಿತಿಯಿಲ್ಲದ ವೆಚ್ಚಗಳು. ಶತ್ರುಗಳ ಕೈ ಮೇಲಾಗುವದು. ಪತ್ರವ್ಯವಹಾರಕ್ಕಿಂತ ಭೆಟ್ಟಿ ನೆಟ್ಟಗೆ. ಭರಣಿ ನಕ್ಷತ್ರದವರಿಗೆ ತೊಂದರೆ ಹೆಚ್ಚು. ತಾ. ೪, ೫, ೬ ಅನುಕೂಲ.

### ವೃಷಭ

ಈ ವಾರ ನಿಮ್ಮ ಗ್ರಹಗತಿ ಅತ್ಯಂತ ಅನುಕೂಲವಾಗಿದೆ. ಹೆಂಡತಿ ಮಕ್ಕಳಿಗೆ ತುಸು ಅಸ್ವಸ್ಥವಾಗಬಹುದಾದರೂ ಉದ್ಯೋಗದಲ್ಲಿ ಕೀರ್ತಿ ಮತ್ತು ಧನಲಾಭ ಯಥೇಷ್ಟವಾಗಿರುವದು. ಸ್ನಾವರದಲ್ಲಿ ಸ್ವಲ್ಪ ತಂಟೆಯಿದ್ದು ಮತ್ತೆ ನಿಮಗನುಕೂಲವಾಗಿಯೆ ರಾಜಿಯಿಂದ ತೀರ್ಮಾನವಾಗುವದು. ಶತ್ರುಗಳ ಎಲುವು ಮುರಿಯುವಂತೆ ನಿಮ್ಮ ವಿಜಯರಥ ಮುನ್ನುಗ್ಗುವದು. ಮಿತ್ರಸುಖ ಉತ್ತಮ. ನಿಮ್ಮ ವಾಹನ ಮಾತ್ರ ತುಂಬ ಕೆಟ್ಟು ಹೋಗುವದರಿಂದ ಪ್ರವಾಸಕ್ಕಿಂತ ಪತ್ರವ್ಯವಹಾರವೇ ಲೇಸೆಂದು ಹೇಳಬೇಕು. ರೋಹಿಣಿ ನಕ್ಷತ್ರದವರಿಗೆ ತುಂಬ ಉತ್ಕರ್ಷ. ತಾ. ೪, ೫, ೬ ಒಳಿತು.

### ಮಿಥುನ

ಹೆಂಡತಿ ಮಕ್ಕಳ ಪ್ರಕೃತಿ ಅಷ್ಟು ಚನ್ನಾಗಿರದು. ಎಡೆಸದ ತೊಂದರೆಗಳು ಬರುವದರಿಂದ ಪ್ರಾಪಂಚಿಕ ಸುಖದಲ್ಲಿ ವಿರಸ. ಬಂಧು ಮಿತ್ರರ ನಿಂದೆಗೂ ಗುರಿಯಾಗುವಿರಿ. ಉದ್ಯೋಗದಲ್ಲಿ ಯಶ, ಪ್ರತಿಷ್ಠೆ, ಲಾಭಗಳು ಧಾರಾಳವಾಗಿದ್ದರೂ ಅತಿ ಖರ್ಚಿನ ಪ್ರಸಂಗಗಳು ತುಂಬ. ದುಸ್ವಪ್ನಗಳಿಂದ ಹರ್ಷಿತರಾಗುವಿರಿ. ವಾದ ಮತ್ತು ಸ್ಪರ್ಧೆಗಳಲ್ಲಿ ಇದ್ದಂತಿರೋ ಸಿದ್ಧೇಶ್ವರಾ! ದೇವರ ವಿಷಯ ಶ್ರದ್ಧಾಹೀನರಾಗುವಿರಿ. ಭೆಟ್ಟಿಗಿಂತ ಪತ್ರವ್ಯವಹಾರ ಹಿತ. ಆದ್ರಾ ನಕ್ಷತ್ರದವರಿಗೆ ತೊಂದರೆ ಕಡಿಮೆ. ತಾ. ೫, ೬, ೭, ೮ ಅನುಕೂಲ.

### ಕರ್ಕ

ನಿಮ್ಮ ಹೆಂಡತಿಯ ಪ್ರಕೃತಿ ಚನ್ನಾಗಿ ಉಳಿಯದಿರುವದರಿಂದಲೋ ಏನೋ ಅವಳು ನಿಮ್ಮ ಮೇಲೆ ಉರಿದುರಿದು ಬೀಳುತ್ತಿರುವಳು. ಉಳಿದ ಪ್ರಾಪಂಚಿಕ ಸುಖವೂ ಅಷ್ಟಕ್ಕಷ್ಟೆ. ಉದ್ಯೋಗದಲ್ಲಿ ಭಾವೀ ಉತ್ಕರ್ಷದ ಲಕ್ಷಣ ಕಂಡರೂ ಪ್ರತಿಷ್ಠೆಯನ್ನು ಕುಗ್ಗಿಸುವ ಸಂಗತಿಗಳು ಜರುಗುವವು. ಆದರೆ ಲಾಭ ಉತ್ತಮ. ವಾದ ಸ್ಪರ್ಧೆಗಳಲ್ಲಿ ಹೇಳತಕ್ಕ ಮಾತುಗಳು ಘಟಿಸುವದಿಲ್ಲ. ಪರೋಪಕಾರದ ಒಂದು ಕೆಲಸ ಮಾಡುವಿರಿ. ಪುಷ್ಯ ನಕ್ಷತ್ರದವರಿಗೆ ಅನಿಷ್ಟವಿಲ್ಲ. ತಾ. ೪, ೭, ೮, ೯ ಹಿತ.

### ಸಿಂಹ

ಸಂಶಯ, ಅವಿಶ್ವಾಸ, ಯಾವುದೇ ಕೆಲಸದಲ್ಲಿ ನಿರುತ್ಸಾಹ ಇವುಗಳಿಂದ ನೀವು ಈ ವಾರ ವಿಷಾದದ ಮೂರ್ತಿಗಳಾಗುವಿರಿ. ನಂಬಿಕೆಯ ಜನರಲ್ಲಿ ಕೂಡಾ ನಿಮ್ಮ ಭರವಸೆ ತಪ್ಪುವದು. ಉದ್ಯೋಗದಲ್ಲಿ ಪ್ರತಿಷ್ಠೆ ಹೆಚ್ಚು. ಲಾಭ ಕಡಿಮೆ. ವಾದಸ್ಪರ್ಧೆಗಳಲ್ಲಿ ವಿರೋಧಿಯ ಕೈ ಮೇಲು. ಪ್ರವಾಸದಲ್ಲಿ ಒಂದು ಬೆಲೆಬಾಳುವ ವಸ್ತು ಕೈಬಿಟ್ಟು ಹೋಗುವ ಸಂಭವವಿರುವದರಿಂದ ಜಾಗ್ರತೆ. ಪತ್ರವ್ಯವಹಾರದಿಂದ ಕೆಲಸ ಸಾಗದು. ಪೂರ್ವಾ ನಕ್ಷತ್ರದವರಿಗೆ ಇಷ್ಟಕ್ಕಿಷ್ಟ ದುರದೃಷ್ಟ. ತಾ. ೪, ೫, ೬. ಅನುಕೂಲ.

### ಕನ್ಯಾ

ನಿಮ್ಮ ಸಿಡುಕನ್ನು ಆದಷ್ಟು ಹಿಡಿತದಲ್ಲಿಡದೆ ಹೋದರೆ ಇಡಿ ಮನೆಯಲ್ಲಿ ಅಸಂತೋಷ ಹಬ್ಬಲು ಕಾರಣರಾಗುವಿರಿ. ಉದ್ಯೋಗದಲ್ಲಿ ಲಾಭ ಚನ್ನಾಗಿದ್ದರೂ ಪ್ರತಿಷ್ಠೆ ಅಷ್ಟಕ್ಕಷ್ಟೆ. ಅನ್ಯರ ಏಳಿಗೆಯನ್ನು ಕಂಡು ಅಡ್ಡಗಾಲು ಹಾಕಲು ಪ್ರಯತ್ನಿಸುವ ದುರ್ಬುದ್ಧಿ ಬರಬಹುದು. ವಾದ ಸ್ಪರ್ಧೆಗಳಲ್ಲಿ ಬಹಳ ವೆಚ್ಚ ಮತ್ತು ವಿಘ್ನಗಳ ನಂತರ ನಿಮ್ಮ ಪಕ್ಷವೇ ಗೆಲ್ಲುವದು. ಪತ್ರವ್ಯವಹಾರ ಒಳ್ಳೇದು. ಹಸ್ತಾ ನಕ್ಷತ್ರದವರು ಅಷ್ಟು ಚಿಂತಿಸಬೇಕಾಗಿಲ್ಲ. ತಾ. ೪, ೭, ೮ ಒಳಿತು.

### ತುಲಾ

ನಿಮಗೂ ನಿಮ್ಮ ಹೆಂಡತಿಗೂ ಒಂದೇ ಬಗೆಯ ಅಸ್ವಸ್ಥವಾಗುವ ಸಂಭವವಿದೆ. ಇತರ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಮಧ್ಯಮ. ಆದರೆ ನೀವು ಪ್ರತಿಯೊಬ್ಬರೂ ಸ್ವಂತದ ಸುಖ ದುಃಖದಲ್ಲಿಯೆ ಮಗ್ನರಾಗಿ ಉಳಿದವರ ಯೋಗಕ್ಷೇಮವನ್ನು ಕಡೆಗಣಿಸುವುದರಿಂದ ಅಸಂತುಷ್ಟಿ ಹಬ್ಬುವದು. ಉದ್ಯೋಗದಲ್ಲಿ ಲಾಭ ಅಷ್ಟಕ್ಕಷ್ಟೆ. ಒಣ ಆಡಂಬರವೇ ಹೆಚ್ಚು. ಮಿತ್ರರ ವಿರೋಧ. ವಾದ ಸ್ಪರ್ಧೆಗಳಲ್ಲಿ ವಿರೋಧಿಗೆ ಒಂದು ಕಣ್ಣು ಹೋದರೆ ನಿಮ್ಮವು ಎರಡೂ ಉಳಿಯವು. ಪತ್ರವ್ಯವಹಾರಕ್ಕಿಂತ ಭೆಟ್ಟಿ ಉತ್ತಮ. ಸ್ವಾತಿಗೆ ಅಷ್ಟು ತ್ರಾಸವಿಲ್ಲ. ತಾ. ೭, ೮, ೯ ಒಳ್ಳೇದು.

### ವೃಶ್ಚಿಕ

ನಿಮ್ಮೆಲ್ಲರ ಪ್ರಕೃತಿಯೂ ಚನ್ನಾಗಿದ್ದು ಪ್ರಾಪಂಚಿಕ ಸುಖವೂ ಮನವಾರ ದೊರೆಯುವದು. ಉದ್ಯೋಗದಲ್ಲಿ ಪ್ರತಿಷ್ಠೆಗೆ ಸ್ವಲ್ಪ ಆಘಾತ ಬರಬಹುದಾದರೂ ಲಾಭ ಚನ್ನಾಗಿರುವದು. ಬದಲಿಯಾಗುವ ನೌಕರಿಯಲ್ಲಿದ್ದರೆ ಬಡತಿ ಸಹಿತ ಬದಲಿಯಾಗುವದು. ಆದರೆ ನಿಮ್ಮ ಪಾಲಿಗೆ ಬರುವ ಊರು ಮಾತ್ರ ಮೈ ನಡುಗಿಸುವಂಥದು. ವಾದ ಸ್ಪರ್ಧೆಗಳಲ್ಲಿ ಅನುಕೂಲ. ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಅನುಕೂಲ. ಅನುರಾಧೆಗೆ ತೊಂದರೆ ಕಡಿಮೆ. ತಾ. ೪, ೭, ೮, ೯ ಅನುಕೂಲ.

### ಧನು

ಪ್ರಕೃತಿ ಸ್ತ್ರೀಸುಖ ಚನ್ನಾಗಿದ್ದರೂ ಮಕ್ಕಳ ವರ್ತನೆಯಿಂದ ನೊಂದುಕೊಳ್ಳುವಿರಿ. ಉದ್ಯೋಗದಲ್ಲಿ ಲಾಭ ಪ್ರತಿಷ್ಠೆ ಎರಡೂ ಚನ್ನಾಗಿದ್ದರೂ ಪ್ರತಿಯೊಂದು ಕೆಲಸ ಸಾಧಿಸಬೇಕಾದರೂ ಜೀವಸುತ್ತು ಬರುವದು. ವಾದ ಸ್ಪರ್ಧೆಗಳಿಗೆ ಮಧ್ಯಮ ಪ್ರವಾಸ ಪ್ರಯೋಜನದ್ದಲ್ಲ. ಪತ್ರವ್ಯವಹಾರ ನೆಟ್ಟಗೆ. ಪೂರ್ವಾಷಾಢಕ್ಕೆ ತುಂಬ ತೊಂದರೆ. ತಾ. ೫, ೬, ೯ ಅನುಕೂಲ.

### ಮಕರ

ನಿಮ್ಮ ಪ್ರಕೃತಿ ತೃಪ್ತಿಕರವಿಲ್ಲದಿದ್ದರೂ ಹೆಂಡತಿ ಮಕ್ಕಳದು ಚನ್ನಾಗಿರುವದು. ಪ್ರಾಪಂಚಿಕ ಸುಖ ಬಯಸಿದಂತೆ. ಉದ್ಯೋಗದಲ್ಲಿ ಉಚ್ಛ್ರಾಯ ಹೊಂದುವದಲ್ಲದೆ ಕೈ ತುಂಬ ಲಾಭವನ್ನು ಸಂಪಾದಿಸುವಿರಿ. ಮಕ್ಕಳ ಭಾಗ್ಯೋದಯದ ಲಕ್ಷಣಗಳೂ ಕಾಣಿಸುವವು. ಒಂದೆರಡು ಧಾರ್ಮಿಕ ಕೃತ್ಯಗಳು ನಿಮ್ಮ ಕೈಯಿಂದಾಗುವವು. ವಾದ ಸ್ಪರ್ಧೆಗಳಲ್ಲಿ ಜಯಿಸುವಿರಿ. ಪತ್ರವ್ಯವಹಾರ ಭೆಟ್ಟಿಗಿಂತ ಹಿತ. ಶ್ರವಣ ನಕ್ಷತ್ರದವರಿಗೆ ಅಶುಭ ಫಲಗಳು ಅಷ್ಟು ತೀವ್ರವಾಗಿಲ್ಲ. ತಾ. ೪, ೭, ೯ ಅನುಕೂಲ.

### ಕುಂಭ

ನಿಮ್ಮ ಪ್ರಕೃತಿ ಸಾಧಾರಣ ನೆಟ್ಟಗಿದ್ದರೂ ಹೆಂಡತಿಯ ಅನಾರೋಗ್ಯ ಮೊದಲಾದ ಕ್ಲೇಶಗಳಿಂದ ತುಂಬ ವಿರಸ. ಉದ್ಯೋಗದಲ್ಲಿಯೂ ಲಾಭ ತುಂಬ ಕಡಿಮೆ. ಖರ್ಚುಗಳು ಮಾತ್ರ ಬೆಳೆಯುತ್ತಹೋಗುವವು. ವಾದ ಸ್ಪರ್ಧೆಗಳಲ್ಲಿ ಮಧ್ಯಮ. ಮಿತ್ರರೇ ಶತ್ರುಗಳಾಗುವರು.

## ಕೃಷ್ಣಾಗಿರಿ ಉಪವನ ಮತ್ತು ಕನ್ಹೇರಿಯ ಬೌದ್ಧ ಗುಹೆಗಳು

(೫ ನೇ ಪುಟದಿಂದ)

ಮುಂಗಡೆ ಎಡ ಇಲ್ಲವೆ ಬಲ ಮಗ್ಗುಲಲ್ಲಿ ಒಂದೊಂದು ಬಾವಿಯನ್ನು ಕಾಣಬಹುದು. ಬಾವಿಗಳೆಂದರೂ ಹೆಚ್ಚೆಂದರೆ ಇವುಗಳ ಆಳ ಹತ್ತು ಹದಿನೈದಡಿಗಳನ್ನು ಮೀರಿಲ್ಲ. ನ್ನುದು ಶಿಲೆಯಲ್ಲೇ ಕೊರೆದ ಈ ಬಾವಿಯ ಮುಖವು ಚಚ್ಚೌಕ, ಆಯತಾಕಾರವಾಗಿದ್ದು ಬಹಳ ಅನುಕೂಲವಾಗಿದೆ. ನಿಜವಾಗಿ ಮಹಡಿಯ ಮನೆಯ ಕೊನೆಯ ಅಂತಸ್ತಿನಂತಿರುವ ತುತ್ತತುದಿಯ ಗವಿಯ ಮುಂಗಡೆಯಲ್ಲಿರುವ ಬಾವಿಯಲ್ಲೂ ನೀರಿದೆ. ಈ ನೀರು ಸದಾಕಾಲವೂ ಇರುತ್ತದೆಂದು ತಿಳಿದಾಗ ಆಶ್ಚರ್ಯವಾಗದಿರದು. ಕೆಲವು ಬಾವಿಗಳ ನೀರು ಅನುಪಯೋಗದಿಂದಾಗಿ, ಕ್ರಿಮಿ ಕೀಟಾದಿಗಳ ವಸತಿಯಾಗಿದೆ. ಆದರೆ ಇನ್ನಿತರ ಬಾವಿಗಳ ನೀರು ಸ್ವಚ್ಛವಾಗಿದ್ದು ಪ್ರವಾಸಿಗಳಿಗೆ ಕುಡಿಯಲು ಬರುತ್ತಿದೆ. ಬೆಟ್ಟವೇರಿದ ಬಳಿಕ ಈ ನೀರ ಸವಿಯನ್ನು ಸವಿದಷ್ಟು ಸಾಕೆನಿಸದು.

ಮುಂದೆ ನೀವು ಅಲ್ಲೆಲ್ಲಾ ಮನಬಂದಂತೆ ಅಲೆಯಬಹುದು. ಬಳಿಯ ಇನ್ನಿತರ ಗುಡ್ಡ ಬೆಟ್ಟಗಳ ಅನ್ವೇಷಣೆಯನ್ನು ಮಾಡಬಹುದು ಒಡನೆ ತಂದಿದ್ದ ತಿಂಡಿ ತಿನಸುಗಳನ್ನು ಮುಕ್ಕಿ ಉಪಾಹಾರವನ್ನು ಮುಗಿಸಬಹುದು. ಬಳಿಕ ಫಲಾಹಾರವನ್ನು ಕೈಕೊಳ್ಳಬಹುದು. ಅಡುಗೆ ಸಾಹಿತ್ಯಗಳನ್ನು ತಂದಲ್ಲಿ ನಿಮ್ಮದೇ ನಳಪಾಕದ ಊಟವನ್ನೂ ಚಪ್ಪರಿಸಬಹುದು. ಆಡಬಹುದು, ಹಾಡಬಹುದು, ಕುಣಿಯಬಹುದು. ಚುಟುಕಿನಲ್ಲಿ ಹೇಳುವದಾದರೆ ನಿಮ್ಮ ಮನಬಂದಂತೆ ವರ್ತಿಸುವ ಸಲುವಾಗಿ ಸ್ವಾತಂತ್ರ್ಯವನ್ನು ಸಡಲಿಸಬಹುದು. ಕೊರತೆಯೆಂದರೆ ಅಲ್ಲಿ ಊಟಕ್ಕಾಗಿ "ಸುಖನಿವಾಸ"ಗಳಿಲ್ಲ; ಭೋಜನ ಗೃಹಗಳಿಲ್ಲ. ಜೀನಸು ಮಸಾಲೆಗಳ ಅಂಗಡಿಗಳಿಲ್ಲ ಆದರೆ ಕಾಫಿ, ಚಾ, ಪಾನೀಯಗಳಿಂದ ತೃಪ್ತಿಪಡುವುದಾದರೆ ಸರಕಾರದ ವತಿಯಿಂದಲೇ ನಡೆಸಲ್ಪಡುವ ಒಂದು ಹಂಗಾಮಿ ವಿಶ್ರಾಂತಿಗೃಹವಿದೆ. ಅಲ್ಲಿ ಯೋಗ್ಯ ಉಪಾಹಾರವನ್ನು ಮುಗಿಸಬಹುದು. ಮನೆಯಿಂದಲೆ ಏನಾದರೊಂದು ತಿನಸನ್ನು ಕಟ್ಟಿ ನಮ್ಮೊಡನೆ ಒಯ್ಯುವದು ವಾಸಿ. ಇಲ್ಲವೆ ಅಡುಗೆಯನ್ನಾದರೂ ಅಲ್ಲೇ ಮಾಡಿ ಜಠರವನ್ನು ತೀರಿಸಬಹುದು. ಉರುವಲು ಕಟ್ಟಿಗೆಗೆ ಅಲ್ಲೇನೂ ತೀದಾಇಲ್ಲ.

### ರಸಿಕರಿಗೆ ಆದರ್ಶ ಸ್ಥಳ

ಶಾಲೆ, ಕಾಲೇಜಿನ ವಿದ್ಯಾರ್ಥಿ ವಿದ್ಯಾರ್ಥಿನಿಯರು ತಂಡ ತಂಡವಾಗಿ ಇಲ್ಲಿಗೆ ಬರುತ್ತಾರೆ; ತನ್ನ ತನ್ನ ಸಹಪಾಠಿಗಳೊಡನೆ ಸರಸವಾಡುತ್ತಾರೆ. ಯುವಕ ಯುವತಿಯರು ಗೆಳತಿ ಗೆಳೆಯರೊಡನೆ, ಸಂಸಾರಿಗಳು ಹೆಂಡಿರು ಮಕ್ಕಳೊಡನೆ ಇಲ್ಲಿ ಬಂದು ಕಲೆಯುತ್ತಾರೆ. ಪ್ರಣಯಿ ಪ್ರಣಯಿನಿಯರು ಕೆಲವೊಮ್ಮೆ ಇದನ್ನು ಬೃಂದಾವನವೆಂದೇ ಬಗೆದು ರಾಸ ಲೀಲೆಯಲ್ಲಿದ್ದಾಗ, ಪ್ರವಾಸಿಗಳು, ಅದರಲ್ಲೂ ಬ್ರಹ್ಮಚಾರಿಗಳು ಅಸೂಯೆಪಡುವದುಂಟು. ಎಂತಿದ್ದರೂ ಕೃಷ್ಣಾಗಿರಿ ಉಪವನವು ಎಲ್ಲರಿಗೂ ಸ್ವಾಗತವನ್ನು ಬಯಸುವಂತಿದೆ. ಯೋಗಿಗಳಾಗಲಿ, ತ್ಯಾಗಿಗಳಾಗಲಿ, ಅಥವಾ ಪ್ರೇಮ ಪೀಡಿತರೇ ಬೇಕಾದರಿರಲಿ, ಅಲ್ಲೆಲ್ಲರಿಗೂ ಸುಖ ಶಾಂತಿಗಳು ಸಿಕ್ಕುತ್ತವೆ. ಹಿಂದೀಯರಲ್ಲದೆ, ಅಂಗ್ಲೇಯರೂ ಇಲ್ಲಿಗೆ ಬರುತ್ತಾರೆ. ನೀವೊಬ್ಬ ಒಳ್ಳೆಯ ಹಾಡುಗಾರನಾದರೆ ಬಳಿಯಲ್ಲೇ ಇದ್ದ ಇನ್ನೊಂದು ಕೂಟದವರು ಹಿಮ್ಮೇಳಕ್ಕೆ ನೆರವಾಗುವರು. ಸುಮ್ಮನೆ ತಪಸ್ವಿಯಂತೆ ಕೂತಾದರೂ ಅಲ್ಲಿ ಸಮಯವನ್ನು ಕಳೆಯಬಹುದು. ಇಲ್ಲವೆ ಸುತ್ತಾಡಬಹುದು.

ಗಿರಿಯ ತುದಿಯಲ್ಲೇ, ತುಳಸೀ ಸರೋವರವು (Tulsi Lake). ಗೋಚರಿಸುವದು. ಈಗ ನಾಲ್ಕೂ ಕಡೆಗೂ ದಿಟ್ಟಿಸಿ ನೋಡಿದರೆ ದಿಗಂತದ ವರೆಗಿನ ಆ ದೃಶ್ಯವು ನಮ್ಮಲ್ಲಿ ಒಂದು ಬಗೆಯ ಚೈತನ್ಯವನ್ನುಂಟುಮಾಡುವುದು. ಬೇಕಾದರೆ ಅಲ್ಲೇ ಮರದ ಬುಡವೊಂದರಲ್ಲಿ ನೆರಳಲ್ಲಿ, ಬಿಡಾರ ಹೊಡೆಯಬಹುದು, ಇಲ್ಲವೆ ಮಲಗಿ ನಿದ್ದೆ ತೆಗೆಯಬಹುದು. "ಮೆಚ್ಚಿದವನಿಗೆ ಮಸಣ ಸುಖ"ವೆಂಬುದು ಇಲ್ಲಿಯ ಕಾಯಿದೆಯೆಂದು ತೋರುತ್ತಿದೆ. ಅದಾಗಲೇ ಸಾಯಂಕಾಲವಾಗುತ್ತಿದೆ. ಮನೆಯನ್ನು ಸೇರಬೇಕಾಗಿದೆ. ಶೀಘ್ರ ನಡೆದರೆ ದಾರಿಯೂ ಸಾಗಿ ಬೇಗನೆ ಮುಗಿಯುವುದು. ಆದರೆ ಕನ್ಹೇರಿ ಗವಿಗಳ ನೆನಹು ಮರೆಯಲಸದಳವಾದುದು. ಕೃಷ್ಣಾಗಿರಿ ಉಪವನವನ್ನು ಇನ್ನೊಮ್ಮೆ ನೋಡಬೇಕೆನಿಸುವದು.

---

ಜನಮತಗಣನೆಯ ಆಡಳಿತೆಗಾರರನ್ನಾಗಿ ಅಮೇರಿಕದ ಆಡ್ಮಿರಲ್ ನಿಮಿಜರೆನ್ನು ನಿಯಮಿಸಿರುವುದರಿಂದ ಕಾಶ್ಮೀರದ ಜನಮತಗಣನೆ ಅಕಾರಣವಾಗಿ ಮುಂದೆ ಹೋಗದಂತೆ ಮಾಡಲು ಬೇಗನೆ ತಾತ್ಕಾಲಿಕ ಒಪ್ಪಂದವನ್ನು ಮುಗಿಸಿಬಿಡಬೇಕೆಂದು ಭಾರತ ಪಾಕಿಸ್ತಾನಗಳ ಸಂ. ರಾ. ಸಂಘದ ಶಿಷ್ಟಮಂಡಲ ಅಭಿಪ್ರಾಯ ಪಟ್ಟಿತು.

× × +

ಡಚ್ ಸರಕಾರವು ಭದ್ರತಾಮಂಡಲದ ಸೂಚನೆಗೊಪ್ಪಿ ಇಂಡೊನೇಶಿಯನ್ನರೊಡನೆ ಹೊಸದಾಗಿ ಮಾತುಕತೆ ಪ್ರಾರಂಭಿಸುವ ನಿರ್ಧಾರ ಮಾಡಿದೆ ಎಂದು ನಂಬಲರ್ಹವಾದ ಸುದ್ದಿಯಿದೆ.

---

ಸ್ಥಾವರದಲ್ಲಿ ಅಲ್ಪ ಸ್ವಲ್ಪ ಸುಧಾರಣೆ, ಯಶಸ್ವಿಯಾಗಬಹುದು. ಶತತಾರಿಕೆಗೆ ತೊಂದರೆ ಕಡಿಮೆ. ತಾ. ೪, ೫, ೬ ಅನುಕೂಲ.

### ಮೀನ

ಆರೋಗ್ಯಭಾಗ್ಯವಿದ್ದರೂ ಅನುಭವಿಸುವ ಯೋಗ ಬೇಕು. ಸುಮ್ಮನೆ ನಿಮ್ಮ ನಿಮ್ಮೊಳಗೆ ಬಡಿದಾಡಿ ಸೊಟ್ಟ ಮೋತಿ ಮಾಡಿಕೊಂಡು ತಿರುಗುವಿರಿ. ಉದ್ಯೋಗದಲ್ಲಿ ಯಶ, ಲಾಭ ಯಥೇಷ್ಟ. ಖರ್ಚು ಬೆಳೆಯುತ್ತಲೆ ಹೋಗುವದು. ಮಿತ್ರರು ಅಡ್ಡಗಾಲು ಹಾಕಬಹುದು. ದಾಯಾದ್ಯರ ಏಳಿಗೆ. ವಾದ ಸ್ಪರ್ಧೆಗಳಲ್ಲಿ ಯಶ. ಪ್ರವಾಸಾದಿ ಕಾರ್ಯಗಳು ಯಶಸ್ವಿಯಾಗುವವು. ಉತ್ತರಾಭಾದ್ರಕ್ಕೆ ತೊಂದರೆ ಕಡಿಮೆ. ತಾ. ೪, ೭, ೮ ಒಳಿತು.

---

# ಕರ್ನಾಟಕ

## ಧಾರವಾಡ

ಹುಬ್ಬಳ್ಳಿ ಗಣೇಶಪೇಟಿಯಲ್ಲಿರುವ ಅಬ್ದುಲ್ ಖಾನ ಬಳ್ಳಾರಿ ಎಂಬವನ ಮನೆಯನ್ನು ಸಬರ್ಬನ್ ಪೋಲೀಸ ಸಬ್ ಇನಸ್ಪೆಕ್ಟರರು ೨೯ ನೇ ತಾರೀಕಿನ ದಿನ ತಪಾಸಮಾಡಿ ೪೬ ಸಾವಿರ ರೂಪಾಯಿಗಳ ನೋಟುಗಳನ್ನು ಮತ್ತು ೫೦೦೦ ರೂ ಬೆಲೆ ಬಾಳುವ ಬಂಗಾರದ ಆಭರಣಗಳನ್ನು ಹಾಗು ಕೈ ಗಡಿಯಾರಗಳನ್ನು ತೆಗೆದುಕೊಂಡು ಹೋದರು. ಇವೆಲ್ಲ ಕಳವಿನ ಮಾಲು ಎಂದು ಪೋಲೀಸರಿಗೆ ಸಂಶಯ. ೧೯೪೪ ರ ವರೆಗೆ ಅಬ್ದುಲ್‌ಖಾನನು ರೇಲ್ವೆ ವರ್ಕಶಾಪಿನಲ್ಲಿ ಕೂಲಿಯಾಗಿದ್ದನು. ಇವನು ಮೇಲಿಂದ ಮೇಲೆ ಎರಡನೇ ಊರುಗಳಿಗೆ ಹೋಗಿ ಬರುತಿದ್ದುದರಿಂದ ಪೋಲೀಸರಿಗೆ ಇವನ ಮೇಲೆ ಸಂಶಯವಿತ್ತು.

ಧಾರವಾಡ ಕರ್ನಾಟಕ ಕಾಲೇಜಿನ ಪ್ರಿನ್ಸಿಪಾಲ ಕೋರಿಯಾ ಇವರು ನಿವೃತ್ತರಾದ್ದರಿಂದ ಅಲ್ಲಲ್ಲಿ ಅವರಿಗೆ ಸತ್ಕಾರಕೂಟಗಳಾಗುತ್ತಿವೆ. ಅವರು ಈಗ ಬೆಳಗಾವಿಯ ರಾಣಿ ಪಾರ್ವತಿದೇವಿ ಕಾಲೇಜಿನ ಪ್ರಿನ್ಸಿಪಾಲರಾಗಿ ಕೆಲಸ ಮಾಡಲು ಒಪ್ಪಿರುವರು.

ಈ ಸಲದ ಎಸ್. ಎಸ್. ಸಿ. ಪರೀಕ್ಷೆಗೆ ಪುಣೆಯ ಸೂರ್ಯವಂಶಿಯೆಂಬವನು ಸುಕಲೆಎಂಬ ವಿದ್ಯಾರ್ಥಿಯ ಹೆಸರಿನಲ್ಲಿ ಧಾರವಾಡದಲ್ಲಿ ಪರೀಕ್ಷೆಗೆ ಕುಳಿತಿದ್ದನು. ಪುಣೆಯ ಅಧಿಕಾರಿಗಳ ಸಂದೇಶದ ಮೂಲಕ ಧಾರವಾಡ ಕೇಂದ್ರದ ಪರೀಕ್ಷಾಧಿಕಾರಿಗಳು ಅವನನ್ನುಗೊತ್ತುಹಿಡಿದು ಭಾವಚಿತ್ರ ಮೊದಲಾದ್ದನ್ನು ತೆಗೆದುಕೊಂಡು ಅವನನ್ನು ಹೊರಗೆ ಹಾಕಿದರು ಮತ್ತು ಪ್ರಕರಣವನ್ನು ಮೇಲಧಿಕಾರಿಗಳಿಗೆ ತಿಳಿಸಿದರು.

ಧಾರವಾಡದಲ್ಲಿ ೨೫ ನೇ ತಾರೀಕು ನಗರಾಧ್ಯಕ್ಷ ಶ್ರೀ ಎಸ್. ಎಸ್ ಮಟ್ಟಿಯವರ ಅಧ್ಯಕ್ಷತೆಯಲ್ಲಿ ಸಾರ್ವಜನಿಕ ಸಭೆಸೇರಿ ಮೈಸೂರು ಕರ್ನಾಟಕದಲ್ಲಿ ಲೀನವಾಗಬೇಕು, ಮೈಸೂರು ಮಹಾರಾಜರು ಸಿಂಹಾಸನ ತ್ಯಾಗಮಾಡಬೇಕು ಹೈದರಾಬಾದ ಸಂಸ್ಥಾನವನ್ನು ಆಯಾ ಭಾಷಾನ್ವಯ ಪ್ರಾಂತಗಳಲ್ಲಿ ಹಂಚಬೇಕು ಎಂದು ಮುಂತಾದ ಗೊತ್ತುವಳಿಗಳು ಸ್ವೀಕೃತವಾದವು. ಈ ಗೊತ್ತುವಳಿಯ ಪ್ರತಿಗಳನ್ನು ಮುಖ್ಯ ಮಂತ್ರಿ ಪಂಡಿತ ಜವಾಹರಲಾಲರಿಗೆ ಕಳಿಸಬೇಕೆಂದು ನಿರ್ಧರಿಸಲಾಯಿತು.

ವಿಶಿಷ್ಟ ಕಾಳುಗಳನ್ನು ಬೆಳೆವವರಿಗೆ ಅನುಕೂಲ ಮಾಡಿಕೊಡಬೇಕೆಂದು ಕಲೆಕ್ಟರರು ಅವರಿಗೆ ಬೇಕಾದ ಧಾನ್ಯಗಳನ್ನು ಅವರ ಧಾನ್ಯಗಳಿಗೆ ವಿನಿಮಯವೆಂದು ಕೊಡಬೇಕೆಂದು ಅಲ್ಲಲ್ಲಿಯ ಸೀದಾ ಅಂಗಡಿ ವ್ಯಾಪಾರಸ್ಥರಿಗೆ ತಿಳಿಸಿದ್ದಾರೆ. ಯಾವ ಯಾವ ಧಾನ್ಯಗಳಿಗೆ ಯಾವ ಯಾವವನ್ನು ವಿನಿಮಯಮಾಡಿ ಕೊಡಬೇಕು, ಪ್ರಮಾಣವೆಷ್ಟಿರಬೇಕು ಮುಂತಾದ್ದನ್ನೆಲ್ಲ ಕಲೆಕ್ಟರರು ಈ ಪ್ರಕಟನೆಯಲ್ಲಿ ತಿಳಿಸಿರುವರು.

ಹುಬ್ಬಳ್ಳಿಯ ಲಿಂಗವಂತ ಸಮಾಜ ಸುಧಾರಣ ಸಂಘದವರು ಶ್ರೀಗುರುಸಿದ್ಧಪ್ಪನವರು ಭೂಸನೂರ ಇವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಭಾವೀ ಹಿಂದೂ ಕಟ್ಟಳೆ ಮಸೂದೆಯನ್ನು ಕೂಲಂಕಷವಾಗಿ ವಿಚಾರಿಸಿ ಇದರಿಂದ ಹಿಂದೂ ಸಮಾಜಕ್ಕೆ ಕೇಡೇ ಹೆಚ್ಚಾಗುವದೆಂದು ನಿರ್ಧರಿಸಿದರು.

ಮುಂಬಯಿ ವತನದಾರ ಕುಲಕರ್ಣಿ ಸಂಘದ ಸಭೆಯು ಹುಬ್ಬಳ್ಳಿಯಲ್ಲಿ ಕಳೆದವಾರ ಅಧ್ಯಕ್ಷ ಶ್ರೀ ಹಣಮಂತರಾವ ಬೆಣ್ಣೂರ ಇವರ ಅಧ್ಯಕ್ಷತೆಯಲ್ಲಿ ಸೇರಿ ಕುಲಕರ್ಣಿಯರು ಅನಿರ್ಬಂಧವಾಗಿ ಕೆಲಸಕ್ಕೆ ಹಾಜರಾಗಬೇಕೆಂಬ ನಿರ್ಣಯವನ್ನುಸ್ವೀಕರಿಸಲಾಯಿತು. ನ್ಯಾಯ್ಯವಾದ ತಮ್ಮ ಬೇಡಿಕೆಗಳತ್ತ ಸರಕಾರದ ಲಕ್ಷ್ಯವನ್ನು ಎಳೆಯುವದೇ ತಮ್ಮ ರಾಜೀನಾಮೆಯ ಉದ್ದೇಶವಾಗಿದ್ದಿತೆಂದೂ ಅದು ಸಾಧ್ಯವಾದ್ದರಿಂದ ಎಲ್ಲರೂ ಕೂಡಲೆ ಕೆಲಸಕ್ಕೆ ಹಾಜರಾಗಬೇಕೆಂದೂ ಕೇಳಿಕೊಳ್ಳಲಾಗಿದೆ.

ಹುಬ್ಬಳ್ಳಿ ನಗರ ಸಭೆಯ ಕೆಳದರ್ಜೆ ನೌಕರದಾರರು ೧—೧—೧೯೪೭ರ ಸರಕಾರೀ ಆಜ್ಞೆಯ ಪ್ರಕಾರ ೩೦ ರೂ ಗಳ ಮಾಸಿಕ ವೇತನ ಮತ್ತು ತುಟ್ಟಿ ಭತ್ತೆ ದೊರೆಯಬೇಕೆಂದು ಕೇಳಿಕೊಂಡು ಬಹಳ ದಿನಗಳಾಗಿದ್ದರೂ ಅವುಗಳ ಪೂರಯಿಕೆಯಾಗಿಲ್ಲಾದ್ದರಿಂದ ೧೬-೬-೪೯ ರ ವರೆಗೆ ಮುನಿಸಿಪಾಲಿಟಿಯಿಂದ ಯೋಗ್ಯ ಉತ್ತರ ಬಾರದಿದ್ದರೆ ತಾವು ಕೆಲಸಕ್ಕೆ ರಾಜೀನಾಮೆ ಕೊಡುವದಾಗಿ ತಿಳಿಸಿದ್ದಾರೆ.

ಆಹಾರ ಧಾನ್ಯ ಸಾಗಾಟ ನಿಯಂತ್ರಣ ಹುಕುಮನ್ನು ಮುರಿದ ಬಗ್ಗೆ ಶೇಖ ಮಸ್ತಾನ ಕಾಶೀಮ ಸಾಹೇಬರಿಗೆ ೩ ತಿಂಗಳು ಕಠಿನ ಶಿಕ್ಷೆ ವಿಧಿಸಲಾಯಿತು.

## ಬಳ್ಳಾರಿ

ಹೊಸಪೇಟೆಯ ಮಾಧ್ಯಮಿಕ ಶಾಲೆಯಲ್ಲಿ ಡಾ. ಸಾವಿತ್ರಿಬಾಯಿಯವರ ಅಧ್ಯಕ್ಷತೆಯಲ್ಲಿ ೨೭ ನೇ ತಾರೀಕು ಶಿಶು ಪ್ರದರ್ಶನ ದಿನಾಚರಣೆಯು ಸಂಗೀತ ನೃತ್ಯ ಮೊದಲಾದ ಕಾರ್ಯಕ್ರಮಗಳಿಂದ ಸಾಂಗವಾಯಿತು.

ರಾಯದುರ್ಗ ತಾಲೂಕು ಭೈರವನತಿಪ್ಪ ಅಣೆಕಟ್ಟಿನ ಅಡಿಗಲ್ಲು ಇಡುವ ಸಮಾರಂಭ ಲೋಕೋಪಯೋಗಿ ಮಂತ್ರಿ ಮಾನ್ಯ ಭಕ್ತವತ್ಸಲಂ ಇವರಿಂದ ಇದೇ ತಿಂಗಳ ಜರುಗುವದೆಂದು ವಿಶ್ವಸನೀಯವಾಗಿ ತಿಳಿಯುತ್ತದೆ. ಮಂತ್ರಿ ಮಾನ್ಯ ಎಚ್. ಸೀತಾರಾಮರೆಡ್ಡಿ ಮತ್ತು ಆರ್. ಸೂರ್ಯನಾರಾಯಣರಾವ ಎಂ ಎಲ್ ಸಿ ಇವರೂ ಈ ಸಮಾರಂಭಕ್ಕೆ ಬರುವರು.

ಬಳ್ಳಾರಿ ಸೆಂಟ್ರಲ್ ಸ್ಟೋರ್‍ಸಿನಲ್ಲಿಯ ಹಾಲಿನ ಪುಡಿ ಡಬ್ಬಿಗಳು ಕಳವಾಗಿ ಹೋದ ಪ್ರಕರಣದಲ್ಲಿ ಸ್ಟೋರ ಕ್ಲಾರ್ಕನಿಗೆ ಒಂದು ವರುಷ ಕಠಿನ ಶಿಕ್ಷೆ ಮತ್ತು ೨೦೦ ರೂ. ದಂಡ ವಿಧಿಸಲಾಯಿತು. ದಂಡ ಕೊಡದಿದ್ದರೆ ಮತ್ತೆ ಮೂರು ತಿಂಗಳ ಶಿಕ್ಷೆ ಅನುಭವಿಸಬೇಕು. ಹಮಾಲರಿಗೆ ೯ ತಿಂಗಳು ಶಿಕ್ಷೆ ೫೦ ರೂ. ದಂಡ ಇಲ್ಲವೆ ಒಂದು ತಿಂಗಳ ಶಿಕ್ಷೆ ವಿಧಿಸಲಾಯಿತು. ಇದರಲ್ಲಿ ಆಪಾದಿತರಾಗಿದ್ದ ಎಂಟು ಹೊಟಲ ಒಡೆಯರು ನಿರ್ದೋಷಿಗಳಾದರು.

ಸುಪ್ರಸಿದ್ಧ ನಟರೂ ಪತ್ರಿಕಾಕರ್ತರೂ ಆಗಿದ್ದಶ್ರೀ ಪಟ್ಟಂಶಾಮರಾಯರು ಕಳೆದವಾರ ನಿಧನಹೊಂದಿದರೆಂದು ತಿಳಿಸಲು ವಿಷಾದಿಸುತ್ತೇವೆ.

## ಕನ್ನಡ ಸಂಸ್ಥಾನ

ಸಂಸ್ಥಾನದ ಆಡಳಿತೆಯನ್ನು ಇತರ ಪ್ರಾಂತಗಳ ಮಟ್ಟಕ್ಕೆ ತರುವ ಧೋರಣಕ್ಕನುಸಾರವಾಗಿ ಮೈಸೂರು ಸಂಸ್ಥಾನ ಸರಕಾರದವರು ಆದಾಯಕರ ಟೆಲಿಫೋನ, ಆಕಾಶವಾಣಿ ಮತ್ತು ಸಂಸ್ಥಾನ ರೇಲ್ವೆಗಳನ್ನು ಕೇಂದ್ರ ಸರಕಾರಕ್ಕೆ ಒಪ್ಪಿಸಲಿರುವರು. ಮೈಸೂರು ಸಂಸ್ಥಾನದ ಒಟ್ಟು ಉತ್ಪನ್ನ ೧೦ ಕೋಟಿ ರೂಪಾಯಿಗಳದಿದ್ದು ಅದರಲ್ಲಿ ೩ ಕೋಟಿ ರೂಪಾಯಿಗಳನ್ನು ಈ ರೀತಿ ಕೇಂದ್ರ ಸರಕಾರಕ್ಕೆ ಕೊಡಲಾಗುವದು.

ಮೈಸೂರು ಸಂಸ್ಥಾನ ಸೈನ್ಯವನ್ನು ಇನ್ನು ಮೇಲೆ ಹಿಂದೀ ಸೈನ್ಯದಲ್ಲಿ ವಿಲೀನಗೊಳಿಸಲಾಗುವದೆಂದು ತಿಳಿಯುತ್ತದೆ.

ಬೆಂಗಳೂರು ಸೆಂಟ್ರಲ್ ತುರಂಗದಲ್ಲಿ ಸ್ಥಳಾಂತರಿಸಲ್ಪಡಲಿದ್ದ ಕೆಲ ಸ್ಥಾನಬದ್ಧ ಕೈದಿಗಳು ವಿರೋಧ ಪ್ರದರ್ಶಿಸಿದ್ದರಿಂದ ಲಾಠಿ ಪ್ರಹಾರ ಮಾಡಲಾಯಿತು. ಅವರಲ್ಲಿ ೩೯ ಸ್ಥಾನಬದ್ಧರು ಮತ್ತು ಕೈದಿಗಳು, ೧೦ ಜನ ವಾರ್ಡರರು ಗಾಯಗೊಂಡರು.

ರಾಯಚೂರಿನಲ್ಲಿ ಕಳೆದ ಅಮಾವಾಸ್ಯೆಯ ದಿನ ಮಸೀದೆಗಳ ಮುಂದೆ ಬಾಜಾ ಬಾರಿಸಿದ ಸಂಬಂಧದ ಖಟ್ಲೆಯಲ್ಲಿ ತಪ್ಪಡಿ ಭೀಮಣ್ಣನ ಮಗ ನರಸಪ್ಪನನ್ನು ಬಂಧಿಸಿ ರಿಮಾಂಡ ಮಾಡಲಾಗಿತ್ತು. ಅತನನ್ನು ಬಿಡಬೇಕೆಂದು ಬಾಡಿಗೆಯ ಬಂಡಿಯವರೆಲ್ಲ ಹರತಾಳ ಮಾಡಿದ್ದರಿಂದ ಮಧ್ಯಾಹ್ನ ನಂತರ ಅವನ ಬಿಡುಗಡೆ ಮಾಡಲಾಯಿತು. ಅವನ ಮೇಲಿನ ಖಟ್ಲೆಯನ್ನು ಹಿಂತೆಗೆದುಕೊಳ್ಳಲಾಯಿತೆಂದೂ ಹೇಳಲಾಗುತ್ತದೆ.

## ಉತ್ತರ ಕನ್ನಡ

ಮುಂಬಯಿ ಸರಕಾರದವರು ಜಿಲ್ಹೆಯ ಅಡವಿಗಳ ಉತ್ಪನ್ನದಲ್ಲಿ ೧೦೦ ಕ್ಕೆ ಎರಡರಷ್ಟು ಅಂದರೆ ಸುಮಾರು ಒಂದು ಲಕ್ಷ ರೂಪಾಯಿಗಳನ್ನು ಕೊಡಲು ಬರುವ ವರುಷದ ಅಂದಾಜ ಪತ್ರಿಕೆಯಲ್ಲಿ ಏರ್ಪಾಡು ಮಾಡಿರುವರು.

ಉತ್ತರ ಕನ್ನಡ ಜಿಲ್ಹೆಯಲ್ಲಿ ತಾ. ೨೦ ರ ವರೆಗೆ ೩೫೪೩೩-೧೪ ೯ ರೂಪಾಯಿ ಗಾಂಧಿ ಸ್ಮಾರಕ ನಿಧಿ ಕೂಡಿರುವದು.

---

ಯುಗಾದಿಯ ಶುಭಮುಹೂರ್ತದಲ್ಲಿಹುಬ್ಬಳ್ಳಿಯಲ್ಲಿ ಮಳೆಯು ಬಿದ್ದಿತು. ಅಂದು ಮಧ್ಯಾಹ್ನ ೩॥ ಗಂಟ್ಯೆಗೆ ಶುರುವಾದ ಮಳೆ ಒಂದು ಗಂಟೆಯವರೆಗೆ ಚೆನ್ನಾಗಿ ಜಡಿದು ಮುಂದೆ ಜಿಟಜಿಟ ಹತ್ತಿತ್ತು. ನೀರಿನ ಕೊರತೆ ಮತ್ತು ವಿಪರೀತ ಕೆಕೆಯನ್ನು ನೋಡಿದರೆ ಮಳೆ ಬೇಕಾಗಿದ್ದರೂ ಒಡೆದು ನಿಂತ ಹತ್ತಿ ಈ ಮಳೆಯಿಂದ ಹಾಳಾಗಿ ಹೋದುದಕ್ಕಾಗಿ ಒಕ್ಕಲಿಗರು ನಿರಾಶೆಗೊಂಡಿದ್ದಾರೆ.

## ಬೆಳಗಾವಿ

ರಬಕವಿಯ ಸಾಲ್ವರು ವ್ಯಾಪಾರಸ್ಥರು ತಮ್ಮ ಮೇಲೆ ಬಂದ ಅಪಾದನೆಯ ಪ್ರಕರಣವನ್ನು ಅಷ್ಟಕ್ಕೆ ಮುಕ್ತಾಯಗೊಳಿಸಲು ಲಂಚ ನಿರ್ಮೂಲನ ಶಾಖೆಯ ಶ್ರೀ ನಾಯಕರಿಗೆ ೧೫ ಸಾವಿರ ರೂಪಾಯಿ ಲಂಚ ಕೊಡಲು ಹೋದಾಗ್ಗೆ ಡಿ. ವಾಯ. ಎಸ್ ಪಿ ಶ್ರೀ ಗುಡಿಯವರು ಅವರನ್ನು ಮ್ಯಾಜಿಸ್ಟ್ರೇಟರ ಸಮಕ್ಷಮ ಸೆರೆಹಿಡಿದು ಪಂಚನಾಮೆ ವೊದಲಾದ್ದನ್ನೂ ಮಾಡಿದರು. ಶ್ರೀ ನಾಯಕರವರು ಲಂಚ ಕೊಡುವ ಮೊದಲಾದ ವಿಷಯವನ್ನೆಲ್ಲ ಮೊದಲೆ ಮೇಲಧಿಕಾರಿಗಳಿಗೆ ತಿಳಿಸಿ ವ್ಯಾಪಾರಸ್ಥರನ್ನು ಇಂತು ಬಲೆಯಲ್ಲಿ ಸಿಕ್ಕಿಸಿದರು.

ಹುಕ್ಕೇರಿ ಅರೋಗ್ಯಧಾಮದ ಮುಖ್ಯ ಡಾಕ್ಟರರಾದ ಕೊಕಟನೂರರು ಕ್ಷಯರೋಗದ ಸಂಬಂಧದಲ್ಲಿ ಹೆಚ್ಚಿನ ಸಂಶೋಧನ ಮಾಡುವದಕ್ಕಾಗಿ ಆಮೇರಿಕೆಗೆ ಪ್ರಯಾಣ ಬೆಳೆಸಿದರು

ಬೆಳಗಾವಿಯ ಪ್ರಸಿದ್ಧ ಡಾಕ್ಟರರಾದ ಶ್ರೀ ಹಣಮಂತರಾವ ಸವಣೂರ ಇವರಿಗೆ ಮನೆಯಲ್ಲಿ ಆಕಳು ಕರುವಿನ ಹಗ್ಗವು ಕಾಲಲ್ಲಿ ತೊಡಗಿದ್ದರಿಂದ ಅಪಘಾತ ಸಂಭವಿಸಿ ಬಲಗೈ ಮುಂಗೈ ಎಲುಬು ಹಾಗು ಎಡಗೈ ತೋಳಿನ ಎಲುಬು ಮುರಿದಿದ್ದು ಡಾ. ತೆರಗುಂಡಿಯವರು ಅವರ ಉಪಚಾರ ನಡೆಸಿರುವರು. ಪ್ರಾಣಕ್ಕೇನೂ ಗಂಡಾಂತರವಿಲ್ಲ.

ಕೊಲ್ಹಾಪುರದಲ್ಲಿ ದಮಯಂತಿಯೆಂಬ ಶ್ರೀಮಂತ ವಿವಾಹಿತ ಸ್ತ್ರೀಯನ್ನು ಅವರ ನೋಕರ 'ಖರಾಡೆ'ಯೆಂಬವನು ಬೆಳಗಾವಿಗೆ ಓಡಿಸಿಕೊಂಡು ಬಂದ ಸುದ್ದಿಯು ಕೊಲ್ಹಾಪುರ ಸಂಸ್ಥಾನ ಪೋಲೀಸರಿಗೆ ಹತ್ತಿದ್ದರಿಂದ ಅವರು ಬೆಳಗಾವಿ ಪೋಲೀಸರ ಸಹಾಯದಿಂದ ಒಂದು ಭೋಜನಾಲಯದಲ್ಲಿ ಅವರಿಬ್ಬರನ್ನು ಸೆರೆಹಿಡಿದು ಕೊಲ್ಹಾಪುರಕ್ಕೆ ಕರೆದುಕೊಂಡು ಹೋದರು. ಸೆರೆಹಿಡಿಯಲ್ಪಟ್ಟಾಗ ಅವರ ಹತ್ತರ ೫೦೦ ರೂ ಮತ್ತು ಮೈಮೇಲೆ ಸುಮಾರು ೫೦ ಸಾವಿರ ಬೆಲೆಯ ಆಭರಣಗಳು ಇದ್ದವೆಂದು ಹೇಳಲಾಗುತ್ತದೆ.

ಹುಕ್ಕೇರಿಯಲ್ಲಿಯ ಕರ್ನಾಟಕ ಆರೋಗ್ಯ ಧಾಮಕ್ಕೆ ಮುಂಬಯಿಯ ಪ್ರಖ್ಯಾತ ಇಂಜಿನಿಯರ ಶ್ರೀ ನಿಂಬಕರ ಇವರು ತಮ್ಮ ತಾಯಿಯ ಹೆಸರಿನಲ್ಲಿ ೨೫೦೦೦ ರೂಪಾಯಿಗಳ ಕಾಣಿಕೆಯನ್ನು ಕೊಟ್ಟರು. ೨೦ ರೋಗಿಗಳ ಶುಶ್ರೂಷೆಗಾಗಿ ಹೊಸ ವಾರ್ಡನ್ನು ಈ ಹಣದಿಂದ ಕಟ್ಟಿಸಲಾಗುವದು.

## ವಿಜಾಪುರ

ಸಾರ್ವಜನಿಕ ಬಸ್ಸುಗಳನ್ನು ತಮ್ಮ ವಶಕ್ಕೆ ತೆಗೆದುಕೊಳ್ಳಬೇಕೆಂಬ ಮುಂಬಯಿ ಸರಕಾರದ ಧೋರಣಕ್ಕನುಸಾರವಾಗಿ ವಿಜಾಪುರ ಜಿಲ್ಹೆಯ ಉತ್ತರಭಾಗದ ಬಸ್ಸ ಸರ್ವಿಸುಗಳನ್ನು ವಶಪಡಿಸಿಕೊಂಡು ಹೊಸ ಸರಕಾರ ಸರ್ವಿಸಗಳ ಉದ್ಘಾಟನೆಯ ಸಮಾರಂಭವು ೨೫ ನೇ. ತಾರೀಕು ಶ್ರೀ ಮುರಿಗೆಪ್ಪ ಸುಗಂಧಿಯವರ ಅಧ್ಯಕ್ಷತೆಯಲ್ಲಿ ಜರುಗಿತು. ಈ ಹೊಸ ಪ್ರಯೋಗದಲ್ಲಿ ಎಲ್ಲರೂ ಸಹಕರಿಸಬೇಕೆಂದು ಸರಕಾರದ ಬಸ್ ನಿಯಂತ್ರಕರು ಬಿನ್ನವಿಸಿಕೊಂಡರು.

೨೭ ನೇ ತಾರೀಕು ನಸುಕಿನಲ್ಲಿ ಕಲಾದಗಿಯಿಂದ ಬಾಗಲಕೋಟೆಗೆ ಮಾರಾಟಕ್ಕೆ ಕಾಳು ತೆಗೆದುಕೊಂಡು ಹೊರಟಿದ್ದ ೫ ಬಂಡಿಗಳ ಜನರನ್ನು ಹಾದಿಯಲ್ಲಿ ಯಾರೋ ಬಡೆದು ೪ ಚೀಲ ಕಾಳು ಲೂಟುಮಾಡಿಕೊಂಡು ಹೋದರು.

ವಿಜಾಪುರ ಜಿಲ್ಹೆಯ ಕಣಕಾಲ, ಮುಪಭಾವಿ, ಚಂದ್ರಗಿರಿ ಮೊದಲಾದ ಗ್ರಾಮಗಳಲ್ಲಿ ೧೪೪ ಕಲಮು ಜಾರಿ ಮಾಡಲಾಗಿದ್ದಿತು. ತಾ. ೩೦ ರಿಂದ ೨೦ ದಿನಗಳ ವರೆಗೆ ಈ ಗ್ರಾಮಗಳಲ್ಲಿ ಪ್ರಾಣಿವಧೆ ಮಾಡಬಾರದೆಂದು ವಿಧಿಸಲಾಗಿದೆ.

## ದಕ್ಷಿಣ ಕನ್ನಡ

ರಾಜಕೀಯ ಸಂಸ್ಕೃತಿಗೆ ಸಹಾಯ ನೀಡುವ ಸರಕಾರದ ಯೋಜನೆಯನ್ವಯ ಬಿ. ಎಸ್. ಕೂರಪ್ಪಶೆಟ್ಟಿ, ಸಿದ್ದು ಸಲ್ಡಾನ್ಹ, ವೀರಪ್ಪ ಪಾಲಿಯಾಸ್, ಸರ್ಪುಗೋತ್ರ ಪ್ರಭು, ರಾಘವೇಂದ್ರಚಾರ್ ಮೊದಲಾದ ೫ ಮಂದಿಗೆ ಭೂದಾನ ಸಹಾಯಸಿಕ್ಕಿರುತ್ತದೆ. ಈ ರೀತಿ ಈ ಮೊದಲು ನಾಲ್ಕು ಮಂದಿಗೆ ಕೊಡಲಾಗಿದೆ.

ದ. ಕ. ಆಟೋಮೊಬೈಲ್ ಕೆಲಸಗಾರರ ಯೂನಿಯನಿನ ಸಭೆಯೊಂದು ದಿನಾಂಕ ೨೬ ರಂದು ಶ್ರೀ ಬಿ. ಗಣೇಶಶೆಟ್ಟರ ಅಧ್ಯಕ್ಷತೆಯಲ್ಲಿ ಜರಗಿದಾಗ ಮುಷ್ಕರದ ಕುರಿತು ಮತ ಸಂಗ್ರಹಿಸಬೇಕೆಂದೂ ಆ ಬಳಿಕವೇ ಮುಷ್ಕರದ ನೋಟೀಸು ಕೊಡಬೇಕೆಂದೂ ನಿರ್ಣಯವಾಯಿತು.

ಕೇಂದ್ರ ಸರಕಾರದವರು ಈಗ ತಂದಿರುವ ಹಿಂದೂ ಮಸೂದೆಯು ಜಾರಿಗೆ ಬಂದಲ್ಲಿ ಕೃಷಿಯ ಅಭಿವೃದ್ಧಿಯೇ ನಿಂತು ಹೋಗಿ ಜಮೀನುಗಳು ಹರಿದು ಹಂಚಿ ಹೋಗಿ ದೇಶದ ಅಭ್ಯುದಯಕ್ಕೆ ವಿಘಾತಕವಾದೀತಾದ್ದರಿಂದ ಆ ಕಾನೂನನ್ನು ಜಾರಿಗೆ ತರಬಾರದಾಗಿ ದ. ಕ. ಮತ್ತು ಕೊಡಗು ಅಡಿಕೆ ಬೇಸಾಯಗಾರರ ಸಂಘದ ಪರವಾಗಿ ಕೇಂದ್ರ ಸರಕಾರಕ್ಕೆ ಒಂದು ಮನವಿ ಕಳುಹಿಸಲಾಗಿದೆ.

ದ. ಕ. ಜಿಲ್ಲಾ ಆದಿ ದ್ರಾವಿಡ ಸಂಘದ ಆಶ್ರಯದಲ್ಲಿ ದಿನಾಂಕ ೨೦ ರಂದು ಆದಿ ದ್ರಾವಿಡರ ಸಭೆಯು ಮಂಗಳೂರಿನಲ್ಲಿ ಸೇರಿ ಆ ಆದಿ ದ್ರಾವಿಡರ ಉದ್ಧಾರದ ಕಾರ್ಯದಲ್ಲಿ ಆದಿ ದ್ರಾವಿಡರು ದುಡಿಯಬೇಕಲ್ಲದೆ ಇತರರನ್ನು ಹೊಂದಿಕೊಂಡಿರುವುದು ಸರಿಯಲ್ಲವೆಂಬದಾಗಿ ಅಧ್ಯಕ್ಷರೂ ಮತ್ತಿತರ ಭಾಷಣಗಾರರೂ ತಿಳಿಸಿದರು.

ಕಿನ್ನಿಗೋಳಿಯ ಕರ್ನಾಟಕ ಸಂಘದ ಕಾರ್ಯದರ್ಶಿಗಳಾದ ಶ್ರೀ ನರಸಿಂಹ ಉಡುಪರು ವೈದ್ಯಕೀಯದಲ್ಲಿ ಹೆಚ್ಚಿನ ಅಭ್ಯಾಸಕ್ಕಾಗಿ ಅಮೇರಿಕಾಕ್ಕೆ ತೆರಳಿ ಎಂ. ಎಸ್. ಮತ್ತು ಎಫ್. ಆರ್. ಸಿ. ಯುಸ್. ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ ಕಳೆದವಾರ ಜನ್ಮಭೂಮಿಗೆ ಮರಳಿಬಂದರು. ಶ್ರೀ ಕೆ. ನರಸಿಂಹ ಉಡುಪರನ್ನು ಹೂಮಾಲೆಯರ್ಪಿಸಿ ಸ್ವಾಗತಿಸಿದರು.

ಉಡುಪಿ ತಾಲೂಕಿನ ರೈತರ ಮತ್ತು ಗ್ರಾಮ ಮೂಲ ಉದ್ಯೋಗಸ್ಥರ ಸಭೆಯೊಂದು ಉಡುಪಿಯಲ್ಲಿ ರೆ॥ ಡಿ॥ ಆಫಿಸರ್ ರಾ॥ ಸಾ॥ ಜೋನ್‌ರವರ ಅಧ್ಯಕ್ಷತೆಯಲ್ಲಿ ಜರಗಿದಾಗ ವಿಪರೀತ ಕೆಲಸವಿದ್ದು ಕಡಿಮೆ ಸಂಬಳವಿರುವ ಗ್ರಾಮ ಉದ್ಯೋಗಸ್ಥರ ಸಂಬಳವೇರಿಸಿ ಅವರ ಸ್ಥಾನಮಾನವೇರಿಸದಿದ್ದರೆ ಅವರು ಕಮ್ಯುನಿಸ್ಟರ ಬಲೆಗೆ ಬೀಳುವ ಅಪಾಯವುಂಟಾಗಬಹುದೆಂಬ ತೀರ್ಮಾನವು ಇತರ ಹಲವು ತೀರ್ಮಾನಗಳೊಂದಿಗೆ ಆಯಿತು.

ಉಡುಪಿಯಲ್ಲಿ ಎಪ್ರಿಲ್ ೧ ರಿಂದ ಮನೆಮನೆಯ ವಠಾರದಲ್ಲೂ ಸೊಳ್ಳೆನಾಶಕ್ಕಾಗಿ ತಕ್ಕ ಕಾರ್ಯ ಕೈಕೊಳ್ಳುವುದಾಗಿ ಮುನ್ಸಿಪಲ್ ಕಮೀಶನರ್ ಶ್ರೀ ಬಾಲ ಗಂಗಾಧರನ್‌ರವರು ತಿಳಿಸಿದರು.

---

## ಡಾ. ರಾಜೇಂದ್ರ ಪ್ರಸಾದರ ಕರ್ನಾಟಕ ಸಂಚಾರ

ಗಾಂಧೀ ರಾಷ್ಟ್ರೀಯ ಸ್ಮಾರಕ ನಿಧಿ ಸಮಿತಿಯ ಅಧ್ಯಕ್ಷರಾದ ಡಾ. ರಾಜೇಂದ್ರ ಪ್ರಸಾದರು ಎಪ್ರಿಲ ೨೨ ರಿಂದ ೨೫ ರ ವರೆಗೆ ಕರ್ನಾಟಕದಲ್ಲಿ ಸಂಚಾರ ಮಾಡುವರು. ಅದೇ ಸಮಯದಲ್ಲಿ ೨೪ ನೇ ತಾರೀಕಿನ ದಿವಸ ಬಾಗಲಕೋಟೆಯಲ್ಲಿ ಸೇರಲಿರುವ ಕರ್ನಾಟಕ ಕಾಂಗ್ರೆಸ ಸೇವಾದಲದ ಪ್ರಾಂತಿಕ ಸಮ್ಮೇಲನವನ್ನು ಈ ಮೊದಲು ಎಪ್ರಿಲ ೯-೧೦ ಕ್ಕೆ ಕೂಡಿಸಬೇಕೆಂದು ಗೊತ್ತಾಗಿತ್ತು. ಅದರೀಗ ಮೇಲೆ ಬರೆದಂತೆ ಅದನ್ನು ಎಪ್ರಿಲ ೨೪-೨೫ ಕ್ಕೆ ಮುಂದೂಡಲಾಗಿದೆಯೆಂದು ವಿಶ್ವಸನೀಯವಾಗಿ ತಿಳಿಯುತ್ತದೆ.

# ಹಿಂದುಸ್ತಾನ

## ಮುಂಬಯಿ

ಮುಂಬಯಿ ಗೃಹರಕ್ಷಕ ದಳದಲ್ಲಿ ಮಹಿಳಾ ವಿಭಾಗವೊಂದನ್ನು ಪ್ರಾರಂಭಿಸಲಾಗುವದೆಂದು ಪುಣೆಯಲ್ಲಿ ೨೭ ಕ್ಕೆ ಕೂಡಿದ್ದ ಗೃಹರಕ್ಷಕದಳದ ವಾರ್ಷಿಕೋತ್ಸವದ ಕಾಲಕ್ಕೆ ಮುಖ್ಯಮಂತ್ರಿ ಶ್ರೀ ಬಾಳಾಸಾಹೇಬ ಖೇರರು ಸಾಂದರು.

ಬರುವ ಬೇಸಿಗೆಯಲ್ಲಿ ಬೆಳಸುವ ಗೆಣಸಿನ ಬೆಳೆಗೆ ಮುಂಬಯಿ ಸರಕಾರವು ಧನ ಸಹಾಯ ನೀಡಲು ನಿರ್ಧರಿಸಿದೆ. ಗೆಣಸನ್ನು ಹಚ್ಚಿದ ಪ್ರತಿ ಹೆಚ್ಚಿನ ಎಕರೆಗೆ ೨೦ ರೂಪಾಯಿಗಳಂತೆ ಈ ಧನಸಹಾಯ ಸಿಕ್ಕುವದು. ಇದಕ್ಕಾಗಿ ಸರಕಾರದವರು ೨೬೯೦೦ ರೂಪಾಯಿಗಳನ್ನು ತೆಗೆದಿಟ್ಟಿದ್ದಾರೆ. ಇದರಿಂದ ಆಗಷ್ಟ ಸಪ್ಟಂಬರ ತಿಂಗಳುಗಳಲ್ಲಿ ೪೦೦೦ ಟನ್ನು ಗೆಣಸು ಬರಬಹುದೆಂದು ಅಂದಾಜು.

ಯಾವದೇ ವಿಶೇಷ ಕಾರ್ಯಕ್ಕಾಗಿ ಸರಕಾರಿ ನೌಕರರಿಗೆ ಸವಲತ್ತಿನ ದರದಂತೆ ಭೂಮಿಯನ್ನು ಕೊಟ್ಟರೆ ಅದನ್ನು ಮೂವತ್ತು ವರುಷಗಳ ವರೆಗೆ ಸರಕಾರದ ಅಪ್ಪಣೆಯಿಲ್ಲದೆ ಹಸ್ತಾಂತರ ಗೊಳಿಸಬಾರದೆಂದು ಸರಕಾರವು ವಿಧಿಸಿದೆ. ಕೆಲ ವಿಶಿಷ್ಟ ಸಂದರ್ಭಗಳಲ್ಲಿ ಮಾತ್ರ ಅಂಥ ಹೊಲಗಳನ್ನು ಹಸ್ತಾಂತರಗೊಳಿಸಲು ಅಪ್ಪಣೆ ಕೊಡಬಹುದು.

ಕೊಲ್ಹಾಪುರದಲ್ಲಿ ಕೂಡಲೆ ಕನ್ನಡ ಶಾಲೆಯೊಂದನ್ನು ಪ್ರಾರಂಭಿಸಬೇಕೆಂದು ಕರ್ನಾಟಕ ಏಕೀಕರಣ ಸಂಘದ ಸ್ಥಳೀಯ ಶಾಖೆಯವರು ನಿರ್ಧರಿಸಿದ್ದಾರೆ. ಹೊರನಾಡ ಕನ್ನಡಿಗರ ನಾಲ್ಕನೇ ಮಹಾಧಿವೇಶನವನ್ನು ಕೊಲ್ಹಾಪುರದಲ್ಲಿ ಕೂಡಿಸಬೇಕೆಂಬ ವಿಚಾರವನ್ನೂ ಮಂಡಳದವರು ನಡೆಸಿದ್ದಾರೆ.

ಮುಂಬಯಿ ಸರಕಾರದವರು ಪ್ರಾಂತದಲ್ಲಿಯ ಜಿಲ್ಹಾ ಪೋಲೀಸ ಹಾಗು ಬೃಹತ್ ಮುಂಬಯಿ ಪೋಲೀಸ ಎರಡೂ ಪಡೆಗಳ ಸಮೀಕರಣ ಮಾಡುವ ಮಸೂದೆಯೊಂದನ್ನು ಶಾಸನ ಸಭೆಯಲ್ಲಿ ಮಂಡಿಸಿದ್ದಾರೆ. ಮುಂಬಯಿ ಪೋಲೀಸರನ್ನು ಜಿಲ್ಹಾ ಪೋಲೀಸ ಪಡೆಗೂ ಜಿಲ್ಹಾ ಪೋಲೀಸಪಡೆಯವರನ್ನು ಮುಂಬಯಿ ಪೋಲೀಸ ಪಡೆಗೂ ವರ್ಗಾಯಿಸುವ ಹಾಗು ಎರಡೂ ಪಡೆಗಳನ್ನು ಪೋಲೀಸ ಇನಸ್ಪೆಕ್ಟರ ಜನರಲ್‌ರ ವಶಕ್ಕೆ ಕೊಡುವ ಏರ್ಪಾಡೂ ಇದರಲ್ಲಿ ಮಾಡಲ್ಪಟ್ಟಿದೆ.

ಮುಂಬಯಿ ಕರ್ನಾಟಕದಲ್ಲಿ ಬೆಳಗಾವಿ ಜಿಲ್ಹೆಯ ಕೌಜಲಗಿ (೨೦೦) ಗುರ್ಲಹೊಸೂರ (೧೫೦) ಮತ್ತು ತುರ್ಕೇವಾಡಿ (೫೦) ವಿಜಾಪುರ ಜಿಲ್ಹೆಯಲ್ಲಿ ಕಲಾದಗಿ (೨೦೦) ಧನ್ನೂರು (೧೫೦) ನೀಲಗುಂದ (೫೦) ಧಾರವಾಡ ಜಿಲ್ಹೆಯಲ್ಲಿ ಸಿಡೇನೂರ (೨೦೦) ಹಿರೇಹೊನ್ನಿಹಳ್ಳಿ (೧೫೦) ಕಲಕೇರಿ (೧೦೦) ಮತ್ತು ಉತ್ತರ ಕನ್ನಡ ಜಿಲ್ಹೆಯಲ್ಲಿ ಮೂರೂರು (೨೦೦) ಚಿಗಳಿ (೧೫೦) ಚೆಂಡಿಯೆ (೧೦೦) ಇವುಗಳಿಗೆ ಗ್ರಾಮ ಸುಧಾರಣೆ ಕಾರ್ಯಕ್ಕಾಗಿ ಸರಕಾರದವರು ಪಾರಿತೋಷಕ ಕೊಟ್ಟಿದ್ದಾರೆ.

ಮಹಾತ್ಮಾಗಾಂಧಿಯವರ ೧೯೪೪ ರಲ್ಲಿ ಮಾಡಿದ್ದ ಮೃತ್ಯು ಪತ್ರವು ಈಗ ಅಹಮದಾಬಾದ ಜಿಲ್ಹಾ ನ್ಯಾಯಾಧೀಶರಲ್ಲಿ ಹಾಜರಮಾಡಲಾಗಿದೆ. ಇದರ ಸಂಬಂಧದಲ್ಲಿ ಯಾರಿಗಾದರೂ ದೂರು ಮಾಡುವದಿದ್ದರೆ ಎಪ್ರಿಲ ೨೫ ರೊಳಗಾಗಿ ಮಾಡಬೇಕೆಂದು ನ್ಯಾಯಾಧೀಶರು ನೋಟೀಸು ತೆಗೆದಿರುವರು.

ಹದಿನಾಲ್ಕು ಲಕ್ಷ ರೂಪಾಯಿ ಬೆಲೆಬಾಳುವ ೬೦೦ ಪೌಂಡು ಬಚ್ಚಿಟ್ಟ ಚಿನ್ನವನ್ನು ಮುಂಬಯಿ ಸುಂಕ ಶಾಖೆಯ ಗುಪ್ತ ಪೋಲೀಸರು ಶೋಧಿಸಿದ್ದಾರೆ. ಮಧ್ಯಪೂರ್ವದಿಂದ ಬಂದ ಈ ಚಿನ್ನವನ್ನು ಕುರಿತೊಗಲಿನ ಗಂಟುಗಳಲ್ಲಿಅಡಗಿಸಿಡಲಾಗಿತ್ತು. ದಿನಾಲು ಒಂದೊಂದೆ ಗಂಟನ್ನು ಹೊರದೆಗೆದು ಸಾಗಿಸಲಾಗುತ್ತ ಇದರ ಸುಳುವು ಹತ್ತಿ ಮೇಲೆ ಹೇಳಿದಂತೆ ಸುಂಕದ ಅಧಿಕಾರಿಗಳು ಅದನ್ನು ಜಪ್ತಮಾಡಿದರು.

## ಪಶ್ಚಿಮ ಬಂಗಾಲ

ಕಲಕತ್ತೆಯ ದಕ್ಷಿಣ ಭಾಗದಲ್ಲಿ ಇರುವ ಒಂದು ಬ್ಯಾಂಕಿನಲ್ಲಿ ಇಬ್ಬರು ತರುಣರು ಪ್ರವೇಶಿಸಿ ರಿವಾಲ್ವರು ತೋರಿಸಿ ೭೦ ಸಾವಿರ ರೂಪಾಯಿಗಳಷ್ಟು ರೋಖ ಮತ್ತು ಬಂಗಾರವನ್ನು ಸುಲಿದುಕೊಂಡು ಹೋದರು. ಹಣ ದೋಚಿಕೊಂಡು ಹೊರಗೆ ಬಂದ ಕೂಡಲೆ ಟ್ಯಾಕ್ಸಿಯೊಂದರಲ್ಲಿ ಅದನ್ನು ಇಟ್ಟುಕೊಂಡು ದರೋಡೆಗಾರರು ಪಲಾಯನ ಮಾಡಿದರು.

ಹೈದರಾಬಾದದ ಮಿಲಿಟರಿ ಗವರ್ನರರ ಸಹೋದರರಾದ ಪಿಂಗಳಪಾಂಡರ ಹೇಮ ಚೌಧರಿ ಮತ್ತು ಕಲಕತ್ತೆಯಲ್ಲಿಯ ಅಮೇರಿಕನ್ ರಾಯಭಾರಿ ಕಚೇರಿಯಲ್ಲಿಯ ಪತ್ರಿಕಾ ಸುದ್ದಿಗಾರ ಜೆ. ಡಬ್ಲು. ಥಾಮುಸನ್‌ರವರು ೨೭ ಕ್ಕೆ ವಿಮಾನ ಅಪಘಾತದಿಂದ ನವಾಬಗಂಜ ಘಾಟದಲ್ಲಿ ಮರಣಹೊಂದಿದರು. ಚೌಧರಿಯವರಿಗೆ ೩೮ ವರ್ಷ ಮತ್ತು ಥಾಮುಸನ್‌ರಿಗೆ ಕೇವಲ ೨೯ ವರ್ಷಗಳಾಗಿದ್ದವು.

ಕಾಂಗ್ರೆಸ ಕಾರ್ಯಕಾರಿ ಸಮಿತಿಯ ಸದಸ್ಯರಾದ ಡಾ ಪ್ರಫುಲ್ಲಚಂದ್ರ ಘೋಷರವರು ಕಲಕತ್ತೆಯಲ್ಲಿ ಪಾರ್ಸಿ ತರುಣ ಸಂಘದಲ್ಲಿ ೨೭ ಕ್ಕೆ ಭಾಷಣ ಮಾಡುತ್ತ ಕಾಂಗ್ರೆಸ್ಸಿನಲ್ಲಿಯ ಅನಿಷ್ಟಗಳನ್ನು ವಿವರಿಸಿ ಅವುಗಳನ್ನು ಹೋಗಲಾಡಿಸಲು ಪ್ರಯತ್ನಿಸಬೇಕೆಂದು ಕೇಳಿಕೊಂಡರು.

ಸುಮಾರು ೭೦ ಮೊಳ ಉದ್ದ ೩ ಮಣ ಭಾರವಾದ ಒಂದು ಹೆಬ್ಬಾವು ಕಲಕತ್ತೆಯ ಕೊನೆಯ ನಿಲ್ದಾಣವಾದ ಸೆಲ್ಡಾ ಸ್ಟೇಶನ ಅಧಿಕಾರಿಗಳ ತಲೆತಿನ್ನಹತ್ತಿದೆ. ಕಟ್ಟಿಗೆಯ ಪೆಟ್ಟಿಗೆಯಲ್ಲಿ ಇಡಲಾಗಿದ್ದ ಈ ಹಾವನ್ನು ಒಂದು ವಾಗಿನಿನಲ್ಲಿ ಹಾಕಲಾಗಿತ್ತು. ಅದೇ ವಾಗಿನಿನಲ್ಲಿ ಮಂಗ ಮತ್ತು ಕರಡಿಮರಿಗಳ ಮತ್ತೊಂದು ಪೆಟ್ಟಿಗೆ ಹಾಗು ಕೆಲ ಪಾರಿವಾಳುಗಳ ಪೆಟ್ಟಿಗೆ ಇದ್ದವು. ಹೆಬ್ಬಾವು ಪಾರಿವಾಳು ಪೆಟ್ಟಿಗೆಯಲ್ಲಿ ಮೋರೆಹಾಕಿ ಕೆಲವನ್ನು ತಿಂದಿದೆ. ಹೆಬ್ಬಾವು ಈಗ ನಿದ್ರೆಯಲ್ಲಿಯೆ ಇದೆ. ಅದನನ್ನು ಕೆಳಗೆ ಇಳಿಸುವದೊಂದು ಸಮಸ್ಯೆಯಾಗಿದೆ.

## ಮದರಾಸ

ಮದರಾಸ ಶಾಸನ ಸಭೆಯಲ್ಲಿ ನಡೆದ ಪ್ರಶ್ನೋತ್ತರದ ಕಾಲಕ್ಕೆ ಸಭಾ ಧುರೀಣರಾದ ಶ್ರೀ ಗೋಪಾಲರೆಡ್ಡಿಯವರು ಮಾತಾಡುತ್ತ ನೋಕರಿಗಳಿಗೆ ಸುಂದರಿಯರೇ ಅರ್ಹರು ಎಂಬದಾಗಿ ಹೇಳಿದರು.

ಮದರಾಸ ಶಾಸನ ಸಭೆಯ ಕಾಂಗ್ರೆಸ ಪಕ್ಷದ ಸಭೆ ಸೇರಿ ರಾಜಾ ಕುಮಾರಸ್ವಾಮಿ ಚೆಟ್ಟಿಯಾರ ಇವರು ಬಹುಮತದಿಂದ ಧುರೀಣರಾಗಿ ಆರಿಸಲ್ಪಟ್ಟರು. ಈಗ ಮುಖ್ಯಮಂತ್ರಿಗಳಾಗಿರುವ ಶ್ರೀ ಓಮಂಡೂರ ರಾಮಸ್ವಾಮಿಯವರು ಹಿಂತೆಗೆದುಕೊಂಡರು. ಶ್ರೀ ಕುಮಾರಸ್ವಾಮಿಯವರ ಪ್ರತಿಸ್ಪರ್ಧಿಗಳಾಗಿದ್ದ ಡಾ. ಪಿ. ಸುಬ್ರಾಯನ್‌ರು ಧುರೀಣರಾಗಿ ಆರಿಸಿಬರಲಿಲ್ಲ.

ಶ್ರೀ ಕುಮಾರಸ್ವಾಮಿ ರಾಜಾ ಇವರು ಮದ್ರಾಸ ಶಾಸನ ಸಭೆಯ ಕಾಂಗ್ರೆಸ ಪಕ್ಷದ ಧುರೀಣರಾಗಿ ಆರಿಸಲ್ಪಟ್ಟಿದ್ದರಿಂದ ಈಗ ಮುಖ್ಯಮಂತ್ರಿಗಳಾಗಿದ್ದ ಶ್ರೀ ರಾಮಸ್ವಾಮಿರೆಡ್ಡಿಯವರು ತಮ್ಮ ಮಂತ್ರಿಮಂಡಳದ ರಾಜೀನಾಮೆಯನ್ನಿತ್ತರು. ಕುಮಾರ ಸ್ವಾಮಿಯವರು ಹೊಸಮಂತ್ರಿ ಮಂಡಳ ಸ್ಥಾಪಿಸಲು ಒಪ್ಪಿಕೊಂಡಿದ್ದು ಅವರ ಮಂತ್ರಿ ಮಂಡಳ ಸ್ಥಾಪಿತವಾಗುವ ವರೆಗೆ ಓಮಂಡೂರ ಮಂತ್ರಿ ಮಂಡಲವೇ ಅಧಿಕಾರದಲ್ಲಿ ಉಳಿಯುವದು.

ಎಪ್ರಿಲ ತಿಂಗಳಲ್ಲಿ ಆದವಾನಿಯಲ್ಲಿ ಕೂಡಬೇಕೆಂದು ಗೊತ್ತಾಗಿದ್ದ ಅಖಿಲಭಾರತ ಕಾಂಗ್ರೆಸ ಸಮಿತಿಯ ಸಭೆಯನ್ನು ಮುಂದಕ್ಕೆ ಹಾಕಲಾಗುವದೆಂದು ತಿಳಿಯುತ್ತದೆ. ಪಂಡಿತ ಜವಾಹರಲಾಲರು ಆಗ ಲಂಡನ್ನಿಗೆ ಹೋಗಲಿರುವದರಿಂದ ಅ. ಭಾ. ಕಾಂ. ಸಮಿತಿಯನ್ನು ಮುಂದೆ ಹಾಕುವರೆಂದು ತಿಳಿಯುತ್ತದೆ.

ಬರುವ ನವಂಬರಕ್ಕೆ ಪಂ. ಜವಾಹರಲಾಲರಿಗೆ ಅರವತ್ತು ವರುಷ ತುಂಬುವದರಿಂದ ಅವರಿಗೆ ಅಭಿನಂದನ ಗ್ರಂಥವನ್ನು ಸಮರ್ಪಿಸಬೇಕೆಂದು ನಿರ್ಧರಿಸಲಾಗಿದೆ. ಈ ಬಗ್ಗೆ ಶ್ರೀ ಲಂಕಾಸುಂದರಂ ಇವರು ಪ್ರಕಟನೆಯೊಂದನ್ನು ಹೊರಡಿಸಿದ್ದಾರೆ.

## ಯುಕ್ತಪ್ರಾಂತ

ತಾವು ಬೆಳೆದ ಕಾಳನ್ನು ರೈತರು ಸರಕಾರಕ್ಕೆ ಮಾರುವಂತೆ ಮನವೊಲಿಸಲು ಅವರಿಗೆ ಹೆಚ್ಚು ಬಟ್ಟೆಯನ್ನು ನೂರಕ್ಕೆ ೧೨ ರಷ್ಟು ಕಡಮೆ ಬೆಲೆಗೆ ಪೂರಯಿಸಲು ನಿರ್ಧರಿಸಲಾಗಿದೆ. ಅಲ್ಲದೆ ಅವರಿಗೆ ಚಿಮಣಿಎಣ್ಣೆ ಸಿಮೆಂಟ ಮತ್ತು ಕಬ್ಬಿಣವನ್ನು ಪೂರಯಿಸಲಾಗುವದು. ರೈತರು ಸರಕಾರಕ್ಕೆ ಮಾರುವ ಕಾಳಿನ ಪ್ರಮಾಣಕ್ಕನುಸರಿಸಿ ಈ ವಸ್ತುಗಳನ್ನು ಅವರಿಗೆ ಕೊಡಲಾಗುವದು. ಹಿಂಗಾರಿ ಬೆಳೆಯ ಎತ್ತುವಳಿಯನ್ನು ಕಣಗಳಲ್ಲಿಯೇ ಮಾಡಲಾಗುವದೆಂದು ಮುಂತಾಗಿ ಮಂತ್ರಿಗಳು ಹೇಳಿದರು.

ಸದ್ಯದ ಸರಕಾರವನ್ನು ಬುಡಮೇಲು ಮಾಡಲು ಕಮ್ಯುನಿಸ್ಟರು ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸುತ್ತಿದ್ದುದರ ಬಗ್ಗೆ ಆದರ ಸಹಿಯುಳ್ಳ ಲೇಖೀ ಪುರಾವೆಗಳು ಸಿಕ್ಕಿರುವದಾಗಿ ಶ್ರೀ ಲಾಲಬಹದ್ದೂರ ಶಾಸ್ತ್ರಿಯವರು ಪೋಲೀಸ ಪಡೆಗಾಗಿ ಹಣ ಬೇಡುತ್ತ ನಿವೇದಿಸಿದರು. ಪ್ರಾಂತದಲ್ಲಿ ಕಮ್ಯುನಿಸ್ಟರಿಗೆ ಬೆಂಬಲವಿಲ್ಲವೆಂದೂ ಅವರು ಹೇಳಿದರು.

ಸಂಯುಕ್ತ ಪ್ರಾಂತದಲ್ಲಿ ೧೫೦ ಕ್ಕಿಂತ ಹೆಚ್ಚು ಕಾಂಗ್ರೆಸ್ಸಿಗರು ಶಿಸ್ತುಭಂಗ ಹಾಗು ಸಮಾಜವಿಘಾತಕ ಚಟುವಟಿಕೆಗಳ ಆಪಾದನೆಗೆ ಒಳಗಾಗಿದ್ದು ಈ ಪ್ರಕರಣಗಳನ್ನೆಲ್ಲ ಪರಿಶೀಲಿಸಲು ಪ್ರಾಂತೀಯ ಕಾಂಗ್ರೆಸ ಸಮಿತಿಯವರು ಒಂದು ಉಪಸಮಿತಿಯನ್ನು ನೇಮಿಸಿದ್ದಾರೆ.

## ಹೊಸದಿಲ್ಲಿ

ಗಾಂಧಿ ಕೊಲೆಯ ಖಟ್ಲೆಯಲ್ಲಿ ಶಿಕ್ಷೆಗೊಳಗಾದ ಗೋಡಸೆ ಪ್ರಭೃತಿಗಳು ಮಾಡಿಕೊಂಡ ಅಪೀಲಿನ ವಿಚಾರಣೆ ಸಿಮ್ಲಾದಲ್ಲಿರುವ ಪೂರ್ವ ಪಂಜಾಬ ಹೈಕೋರ್ಟಿನಲ್ಲಿ ಮೇ ೨ ಕ್ಕೆ ಪ್ರಾರಂಭವಾಗುವದು. ನಥುರಾಮ ಗೋಡಸೆಗೆ ಸ್ವತಃ ಖಟ್ಲೆ ನಡೆಸಲು ಅವಕಾಶ ಕೊಡಲಾಗಿದ್ದು ಉಳಿದ ಆರೋಪಿಗಳೂ ಇದೇ ಸವಲತ್ತನ್ನು ಈಗ ಕೇಳಿರುವರು.

ಕರ್ನಾಟಕದಲ್ಲಿ ಸುಧಾರಿಸಿದ ಶೇಂಗಾ ಬೀಜವನ್ನು ಹಂಚಬೇಕೆಂದು ಕೇಂದ್ರ ಸರಕಾರದವರು ನಿರ್ಧರಿಸಿದ್ದಾರೆ.

ಹಿಂದೀ ಎಣ್ಣೆಕಾಳಿನ ಸಮಿತಿಯ ಸಭೆ ಶ್ರೀ ದಾತಾರ ಸಿಂಗರ ಅಧ್ಯಕ್ಷತೆಯಲ್ಲಿ ಸೇರಿ ನಾಗಪುರದಲ್ಲಿ ಎಣ್ಣೆಕಾಳಿನ ಗ್ರಾಮೋದ್ಯೋಗ ಸಮಿತಿ ಮತ್ತು ಒಂದು ತರಬೇತಿ ಕೇಂದ್ರವನ್ನು ಸ್ಥಾಪಿಸಬೇಕೆಂದು ನಿರ್ಧರಿಸಲಾಯಿತು.

ಕಳೆದ ಜನೆವರಿ ೩೦ ಕ್ಕೆ ಪ್ರಾರಂಭವಾಗಿದ್ದ ಗಾಂಧಿ ಮಂಟಪ ಪ್ರದರ್ಶನದ ಮುಕ್ತಾಯ ಸಮಾರಂಭವು ೨೭ ಕ್ಕೆ ಜರುಗಿತು. ರಾಜಘಾಟದಲ್ಲಿ ಪ್ರಚಂಡ ಜನಸಮ್ಮರ್ದವು ಕೂಡಿದ್ದಿತು. ಮುಖ್ಯ ಮಂತ್ರಿ ಪಂಡಿತ ಜವಾಹರಲಾಲರ ಹಸ್ತದಿಂದ ಪ್ರಾರಂಭವಾಗಿದ್ದ ಈ ಪ್ರದರ್ಶನವು ಮೊದಲು ಎರಡೆ ವಾರ ನಡೆಯಬೇಕೆಂದು ಗೊತ್ತಾಗಿದ್ದರೂ ಜನಸಮ್ಮರ್ದನದ ಮೂಲಕ ೨ ತಿಂಗಳ ನಡೆಯಿತು.

ಅಕ್ಕಿಯ ಎರಡನೇ ಅಂದಾಜು ಪ್ರಸಿದ್ಧವಾಗಿದೆ. ೧೯೪೭-೪೮ ರಲ್ಲಿ ೫೭೪೫೫೦೦೦ ಎಕರೆಗಳಲ್ಲಿ ಭತ್ತ ಬಿತ್ತಲಾಗಿದ್ದು ೧೯೪೮-೪೯ ರಲ್ಲಿ ೫೭೪೫೦೦೦೦ ಎಕರೆಗಳಲ್ಲಿ ಬಿತ್ತನೆಯಾಗಿದ್ದರೂ ಬೆಳೆ ೧೦೦ ಕ್ಕೆ ೧೧ ರಷ್ಟು ಕಡಮೆಯಾಗಿದೆ. ಪ್ರತಿಕೂಲ ಹವೆಯೆ ಇದಕ್ಕೆ ಕಾರಣವಾಗಿದೆ.

ಫೆಬ್ರುವರಿ ಕೊನೆಯ ವರೆಗೆ ಗಾಂಧೀ ರಾಷ್ಟ್ರೀಯ ಸ್ಮಾರಕ ನಿಧಿ ಒಟ್ಟು ರೂಪಾಯಿ ೨೮೭೯೯೫೮-೧-೮ ಕೂಡಿದೆ. ಈ ನಿಧಿಯಲ್ಲಿ ಕರ್ನಾಟಕದಿಂದ ೩೧೧೩೯-೨-೩ ಕೂಡಿದ್ದಿದೆ.

## ಹೈದರಾಬಾದ

ಹೈದರಾಬಾದ ಸಂಸ್ಥಾನದಲ್ಲಿ ವಾಸಿಸುವಂಥ ಎಲ್ಲ ಜನರು ಹಿಂದುಸ್ತಾನದ ಹೊರಗಿನ ತಮ್ಮ ಸೊತ್ತು ಮತ್ತು ಋಣಗಳ ಸಂಬಂಧದ ಮಾಹಿತಿಯನ್ನು ನಿರ್ದಿಷ್ಟ ನಮೂನೆಯಲ್ಲಿ ಹೈದರಾಬಾದ ಸರಕಾರದ ಆರ್ಥಿಕ ಕಾರ್ಯದರ್ಶಿಗಳಿಗೆ ತಿಳಿಸಬೇಕೆಂದು ಪ್ರಕಟನೆ ಹೊರಟಿದೆ.

ಹೈದರಾಬಾದದಲ್ಲಿ ನಡುಗಾಲ ಸರಕಾರ ಬೇಗ ಸ್ಥಾಪಿತವಾಗುವದೆಂದೂ ಸರ್ ಮಿರ್ಝಾ ಇಸ್ಮಾಯಿಲ್‌ರನ್ನು ಮಂತ್ರಿಮಂಡಳ ಸ್ಥಾಪನೆಗಾಗಿ ಬಿನ್ನವಿಸಿಕೊಳ್ಳಲಾಗುವದೆಂದೂ ತಿಳಿಯುತ್ತದೆ.

ಔರಂಗಾಬಾದ ಆರ್ಟ್ಸ್‌ಕಾಲೇಜಿನ ಪ್ರಿನ್ಸಿಪಾಲ ಮೊಯಿನುದ್ದೀನರನ್ನು ಕೆಲಸದಿಂದ ತೆಗೆದು ಹಾಕಲಾಗಿದೆ. ಕಾಲೇಜಿನ ಹಣ ದುರುಪಯೋಗಪಡಿಸಿಕೊಂಡ ಹಾಗು ಪೋಲೀಸ ಕ್ರಮದ ಮೊದಲು ಕಾಲೇಜ ಕಟ್ಟಡವನ್ನು ಬಂದೂಕು ಕಾರಖಾನೆಗೆ ಕೊಟ್ಟ ಆರೋಪ ಅವರ ಮೇಲೆ ಇದೆ.

ನಿಜಾಮರ ಅರಮನೆಗೆ ಪ್ರತಿವರುಷ ೧೮ ಸಾವಿರ ಗಜ ಬಟ್ಟೆಯನ್ನು ಪೂರಯಿಸಲಾಗುತಿತ್ತು ಆದರೆ ಅರಮನೆಯವರು ಅವರ ಅರ್ಧದಷ್ಟು ಕೂಡ ಉಪಯೋಗಿಸುತಿದ್ದಿಲ್ಲ. ಪೇಶೀ ಸರಖಿಕಾದ ಸುಪರಿಂಟೆಂಡೆಂಟರಾಗಿದ್ದ ಅಹಮ್ಮದ ಅಲ್ಲಿ ಎಂಬವರು ಈ ಹೆಚ್ಚಿನ ಬಟ್ಟೆಯನ್ನು ಅರಮನೆಯಿಂದ ಕಳ್ಳತನದಿಂದ ಹೊರಗೆ ಸಾಗಿಸಿ ಸಾವಿರಾರು ರಜಾಕಾರರಿಗೆ ಬಟ್ಟೆಯನ್ನು ಪೂರಯಿಸುತಿದ್ದರೆಂದೂ ವಿಶ್ವಸನೀಯವಾಗಿ ತಿಳಿಯುತ್ತದೆ.

## ಪಾಕಿಸ್ತಾನ

ಗುಡ್ಡಗಾಡು ಜನರ ಕೆಲ ಮುಖಂಡರು ಒಂದು ಸಭೆಯಲ್ಲಿ ಇಪಿ ಫಕೀರನ ಪಾಕಿಸ್ತಾನ ವಿರೋಧಿ ಧೋರಣವನ್ನು ಖಂಡಿಸಿ ಮರಳುವಾಗ ಮಿರಾನಶಹಾದಿಂದ ೧೫ ಮೈಲುಗಳ ಮೇಲೆ ಇರುವ ಮೊಹಮಂಡದ ಹತ್ತರ ಇಪಿ ಫಕೀರನ ಅನುಯಾಯಿಗಳು ಅವರ ಮೇಲೆ ಗುಂಡು ಹಾರಿಸಿದರು. ಕೆಲ ಸಮಯ ಪರಸ್ಪರರಲ್ಲಿ ಚಕಮಕಿ ನಡೆದ ನಂತರ ಇಪಿಫಕೀರನ ಅನುಯಾಯಿಗಳು ಓಡಿ ಹೋದರು.

ಬ್ರಿಟಿಶ ಕಂಜರ್ವೇಟಿವ ಪಕ್ಷದ ಉಪಧುರೀಣರಾದ ಶ್ರೀ ಅ್ಯಂಥನಿ ಈಡನ್‌ರು ಹಿಂದುಸ್ತಾನದಲ್ಲಿಯ ತಮ್ಮ ಸಂಚಾರವನ್ನು ತೀರಿಸಿಕೊಂಡು ಕರಾಚಿಗೆ ಹೋದರು. ಅವರು ಪಾಕಿಸ್ತಾನದ ಗವರ್ನರ ಜನರಲ್ ಅಲ್ಲಿಖಾಜಾ ನಾಜೀಮುದ್ದೀನರೊಂದಿಗೆ ಒಂದು ಗಂಟೆ ಕಾಲ ಚರ್ಚೆ ನಡೆಸಿದರು. ಇತರ ಮಂತ್ರಿಗಳನ್ನೂ ಕಂಡು ಸೋಮವಾರ ಲಂಡನಿಗೆ ಮರಳಿದರು.

ಪಾಕಿಸ್ತಾನದ ನಾಗರಿಕನ ವಿಮಾನ ಶಾಖೆಯ ಹಿಂದಿನ ಡಾಯರೆಕ್ಟರ ಆದಂ ಸ್ಮಿಥರವರು ಪಾಕಿಸ್ತಾನದಿಂದ ಹಾರಿಹೋಗಲು ಖೊಟ್ಟಿ ಪರಮಿಟ್ ಹಾಜರ ಮಾಡಿದರೆಂದು ಖಟ್ಲೆಗೆ ಗುರಿಯಾಗಿರುವರು. ಹತ್ತುಸಾವಿರ ರೂಪಾಯಿ ಜಾಮೀನ ಮೇಲೆ ಅವರನ್ನು ಬಿಡಲಾಗಿತ್ತು. ಆದರೆ ಅವರು ಓಡಿ ಹೋಗುವ ಸಿದ್ಧತೆಯಲ್ಲಿ ಇದ್ದಾರೆಂದು ಸಂಶಯ ಬಂದಿದ್ದರಿಂದ ಅವರಿಗೆ ೨॥ ಲಕ್ಷ ರೂ. ಜಾಮೀನ ಕೇಳಲಾಗಿದೆ. ಇದರ ವಿರುದ್ಧ ಅವರು ಹಾಯಕೋರ್ಟಿಗೆ ಅಪೀಲ ಮಾಡಿರುವರು.

---

ಕಲ್ಬುರ್ಗಿಯಲ್ಲಿಯ ಶರಣಬಸವೇಶ್ವರ ದೇವಾಲಯದ ಕಳಸವನ್ನಿಡುವ ಸಮಾರಂಭ ಕಳೆದ ವಾರ ಜರುಗಿತು. ಆ ಕಾಲಕ್ಕೆ ಉತ್ಸವ ನೋಡಲು ಜನ ತಂಡ ತಂಡವಾಗಿ ನೆರೆದಿದ್ದರು. ಮಾಳಿಗೆಯ ಮೇಲೆ ನಿಂತುಕೊಂಡಿದ್ದ ಜನ ಸಮುದಾಯದ ಭಾರವನ್ನು ತಾಳಲಾರದೆ ಅದು ಕುಸಿದಿದ್ದದ್ದರಿಂದ ಒಬ್ಬ ಹೆಣ್ಣುಮಗಳ ಮತ್ತು ಮೂವರು ಗಂಡಸರು ಮರಣ ಹೊಂದಿದರು. ಈ ಕಳಸವನ್ನು ಈ ಮೊದಲು ಇಡಬೇಕಾಗಿತ್ತು ಆದರೆ ಆಗಿನ ನಿಜಾಮ ಸರಕಾರದವರು ಅದಕ್ಕೆ ಅಪ್ಪಣೆ ಕೊಟ್ಟರಲಿಲ್ಲ.

ಚಾಮರಾಜ ತಾಲೂಕು ಬೇಡರಹೊಡ್ಡು ಎಂಬ ಗ್ರಾಮದ ಬಳಿ ಅರಣ್ಯದಲ್ಲಿ ಕೆಲವರು ಬೇಟೆಗೆ ಹೋದಾಗ ದೊಡ್ಡ ಆನೆಯೊಂದು ಅವರನ್ನು ಅಟ್ಟಿಕೊಂಡು ಬಂದಿತು. ಅದನ್ನು ತಪ್ಪಿಸಿಕೊಳ್ಳಲು ಕೆಲವರು ಪ್ರಯತ್ನಿಸಿದರು. ಆದರೆ ಅಬಲೆಯೊಬ್ಬಳು ಅದರ ಕೈಯಲ್ಲಿ ಸಿಕ್ಕು ಗಾಯಗೊಂಡಳು. ಪೋಲೀಸು ಮೊದಲಾದವರು ಬರುವಷ್ಟರಲ್ಲಿ ಹುಲಿಯೊಂದು ಬಂದು ಆ ಹೆಣ್ಣುಮಗಳನ್ನು ತಿಂದು ಹೋಗಿದ್ದಿತು.

# ಮಹಿಳಾ ಲೋಕ

## ಸಮಾಜಸೇವೆ

ಮದುವೆ ಸಮಾಜ ಸೇವೆಗೆ ಅಡ್ಡಿಯಾಗಬಾರದೆಂಬ ಅಂಶವನ್ನು ಹೊಸದಿಲ್ಲಿಯ ಲೇಡಿ ಇರ್ವಿನ್ ಕಾಲೇಜಿನ ವಿದ್ಯಾರ್ಥಿನಿಯರಿಗೆ ಮುಖ್ಯ ಮಂತ್ರಿ ಪಂ. ಜವಾಹರಲಾಲರು ಉಪದೇಶ ಮಾಡಿದ್ದಕ್ಕೆ "ಸಂಯುಕ್ತ ಕರ್ನಾಟಕ"ದ "ವಿಚಾರಮಂಥನ"ದಲ್ಲಿ "ಕೋರಿಕೆಯ ಸಮಾಜ ಸೇವಕರಿಗೆ ಮದುವೆಯಿಂದ ಒಂದು ಬಗೆಯ ಆತಂಕವುಂಟಾಗುವುದೆಂಬುದನ್ನು ಯಾರೂ ಅಲ್ಲಗಳೆಯರು" ಎಂದುದು ಸತ್ಯವಿದೆ.

ಆದರೆ ಭಾರತದ ಬಡ ಕುಟುಂಬಗಳಲ್ಲಿ ಗೃಹಿಣಿಯೇ ಮನೆಯ ಸರ್ವಕಾರ್ಯನಿರ್ವಹಣ ಮಾಡಬೇಕಾಗಿರುವುದೂ ಆಧುನಿಕ ಜೀವನ ಸಾಧನಗಳು ಸಾಮಾನ್ಯರಿಗೆ ದುರ್ಲಭವೆನಿಸಿರುವುದರಿಂದಲೂ ಪಟ್ಟಣಿಗರಾದ ಕಲಿತ ಹೆಂಗಸರು ಸಹ ಅಲ್ಪಕಾಲವಾದರೂ ಸಾರ್ವಜನಿಕ ಸಮಾಜ ಸೇವೆ ಸಲ್ಲಿಸಲು ಸಮರ್ಥರಾಗಿಲ್ಲ; ಸೋಮಾರಿತನ ಬಹಳ ಕಡೆ ಅಡ್ಡಬರುತ್ತದೆ; ಸೋಮಾರಿತನವಿಲ್ಲದಲ್ಲಿ ಕಾಲಾವಕಾಶರಾಹಿತ್ಯ ಅನುಕೂಲಾಭಾವ ಅಡ್ಡಬರುತ್ತದೆ. ಹಳ್ಳಿಗರಲ್ಲಿ ಪತಿಪತ್ನಿಯರು ಮನೆಹೊರಗಿನ ಕೆಲಸದಲ್ಲೂ ಸಮಭಾಗಿಗಳಾಗುವುದರಿಂದ ಅಲ್ಲಿಯ ಸಮಾಜ ಸೇವೆ ಯಾವ ಮಟ್ಟದ್ದೇ ಇರಲಿ, ಅದು ಪರಸ್ಪರ ಸಮಾನವಿರುತ್ತದೆ. ಸಮಸ್ಯೆಗಳೆಲ್ಲ ಪಟ್ಟಣಿಗರವೇ.

ಇನ್ನು ಮದುವೆಯೇ ಒಂದು ಸಮಾಜ ಸೇವೆ ಎಂಬ ಅಂಶ ಬಹಳ ಜನರಿಗೆ ತಿಳಿದಂತಿಲ್ಲ. ಅದೇ ನಾಗರಿಕ ಜೀವನದ ತಳಹದಿ ಎಂಬುದು ಸಮಾಜ ಶಾಸ್ತ್ರಜ್ಞರಿಗೆ ತಿಳಿದ ಸಂಗತಿ. ಅದಿಲ್ಲದಾಗ ಸಮಾಜವೆಂಬುದಿರಲಾರದು ಅಲ್ಲಿ ಕೇವಲ "ಸಮಾಜ" ಉಳಿದೀತು. ಕೌಟುಂಬಿಕ ಜೀವನ ಸರ್ವರಿಗೂ ಅಗತ್ಯ, ಅದರಲ್ಲೂ ಹೆಂಗಸಿಗೆ ಅತ್ಯವಶ್ಯ ಎಂಬುದು ಶರೀರಶಾಸ್ತ್ರ, ಕಾಮಶಾಸ್ತ್ರ, ಮಾನಸ ಶಾಸ್ತ್ರಗಳು ತಿಳಿಸುತ್ತವೆ. ದೇಹಬಲ ಸ್ಪರ್ಧೆಯಿಂದ ಬದುಕಬೇಕಾದರೆ, ಮಾನವ ಸಂಸ್ಕಾರದ ಪೂರ್ಣತೆ ಪಡೆಯಬೇಕಾದರೆ ಹೆಂಗಸಿಗೆ ಯಾವ ಕಾಯಿದೆಯೂ ಶರಣಲ್ಲ; ಮದುವೆ, ಏಕಪತಿವ್ರತ ಒಂದೇ ಸಾರ್ವಕಾಲಿಕ ಶರಣು. ಕಲ್ಪನಾಶಕ್ತಿ ದೂರದೃಷ್ಟಿ, ಮೂಲಭೂತ ತತ್ವಜ್ಞಾನ ಇವುಗಳಿಲ್ಲದ ಹೆಂಗಸರು ನಾನಾ ವಿಧದ ಸ್ವಾತಂತ್ರ್ಯದ್ವಾರಗಳನ್ನು ಮಾಡಬಹುದು. ಅವೆಲ್ಲ ನಾಗರಿಕರು ಹೋಗಲಿ ಪಾಪ ಎಂದು ಸುಮ್ಮನಿರುವ ವರೆಗೆ ಸಾಗುತ್ತದೆ. ಕುತ್ತಿಗೆಗೆ ಉರುಳು ಬರುವ ಪ್ರಸಂಗಗಳಲ್ಲಿ ಸಮಾಜದಲ್ಲಿ ಮರ್ಯಾದೆಯಿಂದ ಬಾಳಬೇಕೆಂಬವಳಿಗೆ, ಜಗತ್ತಿನ ಯಾವ ಭಾಗದಲ್ಲೇ ಆಗಲಿ, ಎಲ್ಲ ದುರ್ನಿವಾರ್ಯ ಸಂದರ್ಭಗಳನ್ನು ಗಣನೆಗೆ ತಂದುಕೊಂಡರೆ ಮದುವೆಗಿಂತ ಹೆಚ್ಚಿನ ಸುಂದರವಾದ ಸುರಕ್ಷಿತವಾದ, ಹಿತಕರವಾದ, ಮರ್ಯಾದೆಯ ಬಾಳು ಹೆಂಗಸಿಗಿನ್ನೊಂದಿಲ್ಲವೆಂಬುದು ಮನದಟ್ಟಾಗುತ್ತದೆ. ಜೀವನದಲ್ಲಿ ಯಾವ ಸುಖವೂ ದುಃಖರಹಿತವಿಲ್ಲ. ಆದುದರಿಂದ ಮಾನವರ ಮಧ್ಯೆ ಬದುಕುವ ಹೆಂಗಸಿಗೆ ಅಥವಾ ಹೆಂಗಸಿಗೆಂದರೇನು, ಗಂಡಸಿಗೂ ಮದುವೆಯೇ ಮೊದಲು ನಾಗರಿಕವಾದ ಸಾಮಾಜಿಕ ಸಂಸ್ಕಾರ ಕೊಡಬಲ್ಲುದು, ಅದೇ ಸಮಾಜ ಜೀವನದ ಅಡಿಗಲ್ಲು. ಮದುವೆಯಿಂದಾಗುವ ಇಂದ್ರಿಯ ಸುಖ ಬೇಕು, ಆದರೆ ಮದುವೆ ಬೇಡ ಎಂಬವರು ಕಾಡಾಡಿಗಳು ಕೂಡ ಅಲ್ಲ, ಅದಕ್ಕೂ ಕೆಳಗಿನ ಮಟ್ಟದವರು.

ಮದುವೆಯೆಂದರೆ ಸ್ತ್ರೀಪುರುಷರಿಗೆ ಸಮಾಜ ಸೇವೆಗೆ, ರಾಷ್ಟ್ರಸೇವೆಗೆ ಒಂದು ದೀಕ್ಷೆ. ಉರ ನೆಯುವವಿನ್ನಂತೆ. ತನ್ನ ಮನೆ ಮನೆಯನ್ನೂ ಮನೆಯ ಮಂದಿಯನ್ನೂ ಲಕ್ಷಣವಾಗಿ ಆದರ್ಶ ರೀತಿಯಲ್ಲಿ ಪ್ರತಿಯೊಬ್ಬ ದಂಪತಿ ಇಟ್ಟುಕೊಂಡರೆ ಸಮಾಜ ಸೇವೆಯಾದಂತಾಗಲಿಲ್ಲವೆ? ಅದಕ್ಕಿಂತ ಹೆಚ್ಚಿನ ಸಮಾಜಸೇವೆಯಾವುದಿದೆ? ಮನೆ ಬಿಟ್ಟು ಹೊರಡುವುದು ಕುಟುಂಬ ಕುಟುಂಬಗಳ ಸಾರ್ವಜನಿಕ ಸೇವೆಗಾಗಿ, ಅಂದರೆ, ಶಿಕ್ಷಣ, ವೈದ್ಯಕೀಯ, ಔದ್ಯೋಗಿಕ ಮತ್ತು ರಾಜಕೀಯ ರಂಗಗಳಲ್ಲಿ ಭಾಗವಹಿಸುವುದಕ್ಕಾಗಿ. ಗಂಡ ಹೆಂಡಿರ ದೈನಂದಿನ ಕಾರ್ಯಗಳ ಪರಿಮಾಣ ಮತ್ತು ಶ್ರಮಗಳಲ್ಲಿ ಬಹಳ ತಾರತಮ್ಯವಿದ್ದರೆ ಇಬ್ಬರಿಗೂ ಇದಕ್ಕೆ ಕಾಲಾವಕಾಶ ಮತ್ತು ಶಕ್ತಿ ಇರುವುದು ಅಸಾಧ್ಯ. ಕೌಟುಂಬಿಕ ಜೀವನಕ್ಕೆ ಬದಲು ಇನ್ನೊಂದು ದುರ್ಲಭವಿರುವಾಗ, ದುಷ್ಕಲ್ಪನೀಯವಿರುವಾಗ ಅದನ್ನು ಸುಧಾರಿಸಿದರೆ ಮಾತ್ರ ಸಮಾಜ ಸುಖ ಹೆಚ್ಚುತ್ತದೆ. ಆಹಾರ ವಿಹಾರಗಳಲ್ಲಲ್ಲದೆ ಉದ್ಯೋಗ ವ್ಯವಹಾರಗಳಲ್ಲೂ ಹಳ್ಳಿಗರಂತೆ ಪಟ್ಟಣಿಗರಾದ ಸತಿಪತಿಯರಿಗೆ ಸಹಕರಿಸಲು ಅನುಕೂಲ ಒದಗಿದರೆ ಅದು ಆದರ್ಶ ಪ್ರೇಮಮಯ ನಾಗರಿಕ ದಾಂಪತ್ಯವೆನಿಸುತ್ತದೆ. ಮದುವೆಯಿಂದ ಆರಂಭವಾಗುವ ಕೌಟುಂಬಿಕ ಜೀವನಕ್ಕೆ ಅಗತ್ಯವಾದ ಶರೀರ ಮತ್ತು ಮನಃಶಾಸ್ತ್ರಗಳ, ಕಾಮಶಾಸ್ತ್ರ ಮತ್ತು ಪಾಕಶಾಸ್ತ್ರಗಳ ಪರಿಜ್ಞಾನ ಸತಿಪತಿಯರಿಗಿರುವುದು ಅನಿವಾರ್ಯ. ಇದರ ಮೇಲೆ ಏಕವೃತ್ತಿಯಿಂದ ಜೀವಿಸಲು ಸಮಾನ ವೃತ್ತಿಶಿಕ್ಷಣ ಸಿಕ್ಕಿದ್ದರೆ ಅದಕ್ಕೆ ಕಳಸವಿಟ್ಟಂತಾಗುತ್ತದೆ. ಮನೆಗೆಲಸದ ಜೊತೆಗೆ ಹೊರ ಜಗದೊಡನೆ ಸಂಪರ್ಕವಿಟ್ಟುಕೊಳ್ಳುವುದು ನಾಗರಿಕತೆಯ ದೃಷ್ಟಿಯಿಂದ ಹೆಂಗಸಿಗೆ ಅನಿವಾರ್ಯ. ಹಾಗೆ ಮಾಡಲು ಮೊನ್ನಿನ ಅ. ಭಾ. ಮಹಿಳಾಪರಿಷತ್ತಿನ ಒಂದು ಠರಾವಿನಲ್ಲಿ ಹೇಳಿದಂತೆ Part time ಅಲ್ಪಕಾಲಿಕವಾಗಿ ಕಲಿತ ಗೃಹಿಣಿಯರು ವಿವಿಧ ಸಂಸ್ಥೆಗಳಲ್ಲಿ ನೌಕರಿಮಾಡುವ ಅವಕಾಶವನ್ನು ಸರಕಾರ ಮತ್ತು ಸಾರ್ವಜನಿಕ ಸಂಸ್ಥೆಗಳು ಒದಗಿಸಿಕೊಡಬೇಕು. Marriage or career ಮದುವೆಯಾಗಬೇಕೋ ? ಸ್ವತಂತ್ರ ವೃತ್ತಿ ಹಿಡಿದು ಮದುವೆಯಾಗದೆ (ಬ್ರಹ್ಮಚಾರಿಣಿಯಾಗಿ ಇಲ್ಲವೆ ದುರಾಚಾರಿಣಿಯಾಗಿ) ಬಾಳಬೇಕೋ? ಎಂಬ ಬಹುದೊಡ್ಡದೆನಿಸಿದ ಜಾಗತಿಕ ಸ್ತ್ರೀಸಮಸ್ಯೆಗೆ ಇದು ಮಧುರವಾದ, ಹಿತಕರವಾದ ಮತ್ತು ನ್ಯಾಯ್ಯವಾದ ಉತ್ತರವಲ್ಲವೆ ?

ಸ್ತ್ರೀಪುರುಷರ ಸಾಮರಸ್ಯ, ಸಹಕಾರ ಅಧಿಕವಾದ ಹೊರತು ಕುಟುಂಬ ಮತ್ತು ತನ್ನಿಷ್ಠ ಸಮಾಜ ಸರ್ವಾಂಗಿಕ ಉನ್ನತಿಯನ್ನು ಹೊಂದಲಾರದಾದುದರಿಂದ ಹುಟ್ಟಿನಿಂದ ಸಾಯುವ ವರೆಗೆ ಸ್ತ್ರೀಪುರುಷರಲ್ಲಿ ಸರ್ವಸಮಾನವಾದ ಸರ್ವಸಾಧಾರಣವಾದ, ಪ್ರಮಾಣ ಬೇರಾದರೂ ಪ್ರಕಾರ ಬೇರಾಗದ, ದೈಹಿಕ ಮತ್ತು ಮಾನಸಿಕ ಶಿಕ್ಷಣ, ಕಾರ್ಯ ಮಾಡುವ ಕ್ಷೇತ್ರ, ವಿರಾಮ, ಅರ್ಥ, ಆನಂದ ಮುಂತಾದುವು ಇರುವುದು ಅವಶ್ಯಕವೆಂಬುದರಲ್ಲಿ ಸಹಶಿಕ್ಷಣದ ಮಾತು ಅಪರಿಹಾರ್ಯವಾಗಿ ಬಂದು ಬಿಡುತ್ತದೆ. ಸುಖಬೇಕಾದರೆ, ಒಡನಾಡಬೇಕು, ಒಡನೋದಬೇಕು. "ಸಹನಾವವತು, ಸಹನೌಭುನಕ್ತು, ಸಹವೀರ್ಯಂ ಕರವಾವಹೈ" ಎಂದು ಹಿಂದೆ ಗುರುಶಿಷ್ಯರು ಹೇಳಿದರೆ ಇಂದು ('ಸುಖವನ್ನು ಬಯಸುವ) ಸತಿಪತಿಯರು ಹೇಳುವಂತಾಗಬೇಕು. ಇದಕಿಂತ ಮಧುರತಮವೂ ಉತ್ತಮಾದರ್ಶವೂ ಎನಿಸಿದ ದಾಂಪತ್ಯವುಂಟೇ? ಸಮಾಜ ಸೇವೆಯ ಮಾದರಿಯುಂಟೇ? ಸ್ವತಃ ಗೃಹಿಣಿಯರು ಆದರ್ಶ ರೀತಿಯಿಂದ ಧೀರರೂ ಕರ್ಮಕುಶಲರೂ ಸಾತ್ವಿಕರೂ ಆಗಿ ಬಾಳಿದರೆ ಸುತ್ತಮುತ್ತಲಿನ ಗಂಡಸರು ಹೆಂಗಸರು ಮತ್ತು ಮಕ್ಕಳು ಅವರ ಜೀವನದಿಂದ ಒಳ್ಳೆಯ ಪಾಠಗಳನ್ನು ಕಲಿತು ಶಿಕ್ಷಣ ಹೊಂದುವಂತಾಗುವುದು ಅತ್ಯುತ್ತಮವೂ ಅತ್ಯವಶ್ಯವೂ ಆದ ಸಮಾಜಸೇವೆಯಲ್ಲವೆ?

— ಹಿರಿಯಕ್ಕ

---

● ಜಪಾನದ ಟೋಕಿಯೋದಲ್ಲಿ ನಡೆದ ಕಥೆ: ಒಂದು ದಿನ ವೈಮಾನಿಕ ಕುಳಿತಿದ್ದ ಒಂದು ಜೇನ್ನೊಣವನ್ನು ಬಾಲದಿಂದ ಬಡಿದು ಕೊಂದಿತ್ತು. ರೊಚ್ಚಿಗೆದ್ದ ಅದರ ೬೦೦೦೦ ಜಾತಿಬಾಂಧವರು ದನದ ಮೇಲೆರಗಿ ಕಡಿಕಡಿದು ಅದನ್ನು ಕೊಂದವು. ಜೇನ್ನೊಣಗಳ ಪಕ್ಷದಲ್ಲಿ ಸಾವಿಗೀಡಾದವರ ಸಂಖ್ಯೆ ೧೦೦೦೦.

● ಸಿಕ್ಕೆಯಲ್ಲಿ ಮಾತಾಡುವ ಹಕ್ಕಿಗಳ ಸ್ಪರ್ಧೆಯಲ್ಲಿ ಎರಡು ಗಿಳಿಗಳನ್ನು ಹೊರಗೆ ಹಾಕಲಾಯಿತು. ಅವನ್ನು ನಿರ್ಣಾಯಕರ ಮೇಜಿನ ಕಡೆ ಅವುಗಳ ಇಬ್ಬರು ಒಡೆಯರು ಒಯ್ಯುತ್ತಿದ್ದಾಗ ಅವು ಹೊಲಸು ಮಾತುಗಳಿಂದ ಬಯ್ಯತೊಡಗಿದವಂತೆ!

## ಗಾಂಧಿಯುವರೂ ಕೃತಕಾಲಂಕಾರವೂ

ಗಾಂಧಿಯವರನ್ನು ಸ್ಮರಿಸದ ಸಭ್ಯಸ್ತ್ರೀ ಇಂದು ಹಿಂದುಸ್ತಾನದಲ್ಲಿ ಸಿಕ್ಕಲಾರಳು. ಅವರು ಸ್ತ್ರೀಯರ ಹಕ್ಕುಗಳ ಬಗ್ಗೆ, ಗುಣಗಳ ಬಗ್ಗೆ ಹೊಗಳಿ ಹೇಳಿದ ಮಾತನ್ನು ಸಮಯ ಬಂದಾಗೆಲ್ಲ ಉದ್ಧರಿಸಿ ಆಸ್ಥೆಯ ಮುಂದಿಡುವ ಸ್ತ್ರೀವಾದಿಗಳು ಸಿಕ್ಕಲಾರರು. ಅದೇ ಮೇರೆಗೆ ಅಂಥವರು ಇಂದಿನ ಸ್ತ್ರೀಯರ ಗುಣ, ನಡತೆ, ಅಲಂಕಾರಗಳ ಬಗ್ಗೆ ಹೊಗಳಿದ್ದನ್ನು ಎತ್ತಿ ಆಡದ ಹುಡಗಿಯಾದರೂ ದುರ್ಲಭಳೇ ಅಲ್ಲವೇ ? ತಮ್ಮ ಬಾಧ್ಯತೆಯೇನೆಂಬುದನ್ನು ಅರಿಯದೆ ಹಕ್ಕಿನ ಬಗ್ಗೆ ಹೋರಾಡುವ ಈ ಅಲ್ಪಸಂಖ್ಯಕ ಬುದ್ಧಿಯ ಯುಗದಲ್ಲಿ ವಿಚಾರ ಶುದ್ಧತೆಯನ್ನು ಕಾದುಕೊಳ್ಳುವುದು ಸಾಮಾನ್ಯ ಹೆಂಗಸಿಗೆ ಸಾಧ್ಯವಿಲ್ಲವಾಗಿದೆ ಎಂಬ ಮಾತನ್ನು ವಿಚಾರ ಮತಿಯರು ಅಲ್ಲಗಳೆಯಲಾರರು.

ಗುಂಡಾಜನರ ಮೇಲೆಯೇ ಸದಾ ಆರೋಪ ಹೊರಿಸುವ ತರುಣಿಯರಿಗೆ ಗಾಂಧೀಜಿ ಏನಂದಿದ್ದಾರೆ ಗೊತ್ತೆ ? ಅವರ ತಪ್ಪಿಗಿಂತ ನಿಮ್ಮ ತಪ್ಪೇ ಹೆಚ್ಚಿನದು. ನಿಮ್ಮ ಗಂಡ ಅಥವಾ ಅಪ್ಪನ ಸ್ಥಾನಮಾನಗಳನ್ನು ಗಣಿಸದೆ ಅದಕ್ಕೆ ಮೀರಿದ ಆಧುನಿಕ ಐರೋಪ್ಯರ ಕೃತಕಾಲಂಕಾರಗಳನ್ನು ಸೂಳೆಯರಂತೆ ಧರಿಸಿ ನಿಮ್ಮಲ್ಲಿರುವ ಕೃತಕತೆಯಿಂದ ಮನೋದೌರ್ಬಲ್ಯವನ್ನೂ ಅಪವಿತ್ರ ಬುದ್ಧಿಯನ್ನೂ ಗುಂಡಾಜನರಿಗೆ ನೀವೇಕೆ ಪ್ರದರ್ಶಿಸಬೇಕು ? ನಿಮ್ಮ ಆತ್ಮಶುದ್ಧವಿಲ್ಲ, ಧೀರವಿಲ್ಲ, ಕೃತಕವಿದೆ, ಅಧೀರವೂ ಅಶುದ್ಧವೂ ಇದೆ ಎಂಬುದನ್ನು ನಿಮ್ಮ ಬಣ್ಣದ ತುಟಿಗಳು, ಹುಡಿ ಹಚ್ಚಿದಕೆನ್ನೆಗಳು, ಬೇಕೆಂದು ಬಿದ್ದು ಹೋಗುವಂತೆ ಸೀರೆಯುಟ್ಟುಕೊಂಡು ಗಂಡಸರನ್ನು ಕಂಡೊಡನೆಯೇ ಗಾಬರಿಗೊಂಡವರಂತೆ ಅದನ್ನು ಬಿನ್ನಾಣದಿಂದ ಸರಿಪಡಿಸಿಕೊಳ್ಳುವುದು ಕೃತಕ ಕೂದಲನ್ನು ಕಟ್ಟಿಕೊಂಡು ಅದಕ್ಕೆ ಕಾಗದದ ಅಥವಾ ನಿಜವಾದ ಹೂವನ್ನು ಮುಡುವುದು ಮುಂತಾದ ಚೇಷ್ಟೆಗಳು ತಾವೇ ತಾವಾಗಿ ಗುಂಡಾಜನರಿಗೆ ಬನ್ನಿ ಬನ್ನಿ ಎಂದು ನಿಮಂತ್ರಿಸುತ್ತವೆ. ಸಿರಿವಂತೆಯರಿಗೆ ಕೆಲಸವಿಲ್ಲ. ಅವರು ಸೋಫಾದಲ್ಲಿ ಕುಳಿತು ತೂಗಿಕೊಳ್ಳುವ, ಕಾರಿನಲ್ಲಿ ಮೆರೆಯುವ ಜನರು. ಅಂಥವರು ಬೇಕಾದ್ದು ಮಾಡಿದರೆ, ಅವರಿಗೆ ಬೇಕಾದ್ದೇ ಸಿಗುತ್ತದೆ. ಅವರನ್ನು ಅನುಸರಿಸುವ ಇತರರಾದರೂ ಪರಿಣಾಮಚಿಂತನವಿಲ್ಲದೆ ಯೋಗ್ಯತೆಗೆ ಮೀರಿದ ವಿಲಾಸಕ್ಕೆ ಮನಸೋತು ಕೃತಕಜೀವನ ಸಾಗಿಸಿ ತನ್ನೊಳಕ ಅಪಮಾನವನ್ನು ಸ್ವಾಗತಿಸುತ್ತ, ಅದೇ ಬಾಯಲ್ಲಿ ತಮಗೆ ಮಾನ್ಯತೆ ಸಿಗಬೇಕೆಂದರೆ ಅದು ಹೇಗಾದೀತು ? ಅವರಂತೆಯೇ ಅಥವಾ ಅವರಿಗಿಂತಲೂ ಹೆಚ್ಚಾಗಿ ದುಷ್ಟಪಡಕ್ಕೆ ಬಲಿಯಾಗುತ್ತಾರೆ. ಇಂಥ ಸಂದರ್ಭಗಳಲ್ಲಿ ಪ್ರೇರಿತರಿಗಿಂತ ಪ್ರೇರಕರಾದ ನೀವೇ ಮೊದಲು ತಪ್ಪು ಗಾರರಲ್ಲವೆ ? ನಿಮ್ಮ ಮನ ಮರ್ಕಟದಂತೆ ನಡೆದುಕೊಂಡದ್ದನ್ನು ಒಪ್ಪಿಕೊಳ್ಳದೆ ಅದನ್ನು ಕಂಡು ಮರ್ಕಟವಾದ ಅನ್ಯರನ್ನು ದೂರಿದರೆ ಬಂದ ಫಲವೇನು ? ನನ್ನ ಹೆಂಡತಿ ಕಸ್ತೂರಬಾ ಅವರನ್ನು ನೋಡಿರಿ. ಅವರು ತಮ್ಮ ನಡೆನುಡಿಯಲ್ಲಿ ಯಾವ ಕೃತಕತೆಯನ್ನೂ ಇಟ್ಟುಕೊಂಡಿಲ್ಲ, ಒದರಿಂದ ಲಂಕೆಗೊಯ್ದರೂ ಸೀತೆಯನ್ನು ಹೇಗೆ ರಾವಣನು ಅವಮಾನಿಸಲು ಧೈರ್ಯಮಾಡಲಿಲ್ಲವೋ ಹಾಗೇ ಅಂಥ ಪವಿತ್ರಾತ್ಮರನ್ನು ಅವಮಾನಿಸಲು ಯಾರಿಗೂ ಧೈರ್ಯಬರಲಾರದು. ಪಾವಿತ್ರ್ಯವೇ ಸೌಂದರ್ಯ. ಗಾಂಭೀರ್ಯ, ಒಳಹೊರಗಿನ ಶುದ್ಧಿ, ನಯ, ಪ್ರೀತಿ, ಸತ್ಯ, ನಿರ್ವಂಚಕತೆ ಸ್ವಾಭಿಮಾನ, ಸೇವಾಕಾಂಕ್ಷೆ ಇವಕ್ಕೇ ನಾನು ಪಾವಿತ್ರ್ಯವೆನ್ನುವುದು. ಪಾವಿತ್ರ್ಯವಿದ್ದಲ್ಲಿ ದೇವರಿದ್ದೇ ಇದ್ದಾನೆ. ಮನಸ್ಸಿದ್ದವರಿಗೆ ಹೀಗಿರುವುದು ಅತಿಸುಲಭ. ಮನಸ್ಸಿಲ್ಲದವರಿಗೆ ಎಲ್ಲವೂ ದುರ್ಧರವೇ! ಕೃತಕತೆ, ಡಾಂಭಿಕತೆಗಳು ಹೆಂಗಸರ ಅಧಃಪಾತಕ್ಕೆ ಕಾರಣಗಳು. ವಿಲಾಸಿನಿಯರೆಂದೂ ಅಂತಃಶುದ್ಧಿಯುಳ್ಳವರಾಗಿರಲಾರರು. ಕೃತಕಾಲಂಕಾರದ ಹೆಂಗಸಿನ ಚೆಂದ ಕೃತಕವಲ್ಲವೆ ಸಹಜಸುಂದರವೆಂದೂ ಆಗಲಾರದು. ಕೃತಕತೆ ಕಾಪಟ್ಯದ ತಾಯಿ. ವೇಷಭೂಷಣಗಳಲ್ಲಿಯ ಈ ಕಪಟಾಲಂಕಾರಗಳು ಒಳಗಿನ ಮನಸ್ಸಿನ ಕಾಪಟ್ಯವನ್ನು ಹೊರಗೆಡಹುತ್ತವೆ; ವ್ಯರ್ಥ ಕಾರ್ಯಗಳಲ್ಲಿ ಆಸಕ್ತವಾಗುವ ಮನೋದೌರ್ಬಲ್ಯವನ್ನು ಬಯಲಿಗೆಳೆಯುತ್ತವೆ.

ಮನು ಬೆಹನ್ನಳ ದಿನಚರಿಯಲ್ಲಿ ಮೇಲಿನ ಅಭಿಪ್ರಾಯವನ್ನು ನೀವು ಕಾಣಬಹುದು. ಅಳೆ ಅದನ್ನು ತನಗೆ ಗಾಂಧಿಯವರು ಉಪದೇಶಿಸಿದ್ದಾಗಿ ಹೇಳಿದ್ದಾಳೆ.

— ಸುಧನ್ವೆ

